## ಉಪಯುಕ್ತವಾಗುವ ರೀತಿಯಲ್ಲಿ ಬರೆದಿದ್ದಾರೆ !

ರಾಷ್ಟ್ರಭಾಷೆಯಾದ ಹಿಂದಿಯ ಅಧ್ಯಯನಕ್ಕಾಗಿ ಅದರ ವ್ಯಾಕರಣದ ಪರಿಜ್ಞಾನ ಮಾಡಿಕೊಳ್ಳುವದು, ಅತ್ಯಂತ ಮಹತ್ವಪೂರ್ಣ ಮಾತಾಗಿದೆ. ಏಕೆಂದರೆ ವ್ಯಾಕರಣವು ಭಾಷೆಯ ಭದ್ರ ತಳಹದಿಯಾಗಿದೆ. ಶ್ರೀ. ಎ. ಎಚ್. ಹುಂಡೇಕಾರ ಮತ್ತು ಶ್ರೀ. ಎಮ್. ಎಚ್. ಬೆಳಲದವರ ಇವರು ದ. ಭಾ. ಹಿಂದಿ ಪ್ರಚಾರ ಸಭೆ(ಮದ್ರಾಸ)ಯ ಅನುಭವಿಕ ಹಾಗು ಉತ್ಸಾಹಿ ಪ್ರಮಾಣಿತ ಪ್ರಚಾರಕರಾಗಿದ್ದಾರೆ. ತಮ್ಮ ಸತತ ಪ್ರಯತ್ನದಿಂದ ಸಿದ್ಧಪಡಿಸಿದ ಇವರ "ಆದರ್ಶ ಹಿಂದಿ-ಕನ್ನಡ ವ್ಯಾಕರಣ-I"ವನ್ನು ಆಮೂಲಾಗ್ರ ಓದಿದೆನು. ನಿಜಕ್ಕೂ ಲೇಖಕರು **ಪ್ರಾಥಮಿಕ ಶಾಲೆಗಳ ವಿದ್ಯಾರ್ಥಿ ಮತ್ತು ಶಿಕ್ಷಕರಿಗೆ ಉಪಯುಕ್ತವಾಗುವ ರೀತಿಯಲ್ಲಿ ಬರೆದಿದ್ದಾರೆ.** ಶಿಕ್ಷಕ ಬಂಧುಗಳು ಹಾಗು ವಿದ್ಯಾರ್ಥಿಗಳು ಇದನ್ನು ಅತ್ಯಂತ ಆದರದಿಂದ ಸ್ವಾಗತಿಸಿ ಲೇಖಕರ ರಾಷ್ಟ್ರಭಾಷಾಪ್ರಚಾರ ಕಾರ್ಯದಲ್ಲಿ ನೆರವು ನೀಡುವರೆಂದು ನಂಬಿದ್ದೇನೆ.

ಧಾರವಾಡ
೧-೬-೧೯೬೦

**ಎ. ವ್ಹಿ. ಕೌದಿ,** ಬಿ. ಎ.
ಕಾರ್ಯಾಧ್ಯಕ್ಷ,
ಕ. ಪ್ರಾ. ಹಿಂದಿ ಪ್ರಚಾರ ಸಭಾ, ಧಾರವಾಡ

## ವಿಷಯ ವಿವೇಚನೆಯು ಕ್ರಮಬದ್ಧವಾಗಿದೆ !

ಪ್ರಾಥಮಿಕ ಶಾಲೆಗಳ ಹೊಸ ಅಭ್ಯಾಸ ಪತ್ರಿಕೆಗೆ ಅನುಗುಣವಾಗಿ ತಯಾರಿಸಿದ ಹಿಂದೀ ಕನ್ನಡ ವ್ಯಾಕರಣ ಪುಸ್ತಕಗಳು ಇಲ್ಲವೆಂದೇ ಹೇಳಬಹುದು. ಈ ಕೊರತೆಯನ್ನು ನೀಗಿಸಲು **"ಆದರ್ಶ ಹಿಂದೀ-ಕನ್ನಡ ವ್ಯಾಕರಣ-I"** ಈ ಪುಸ್ತಕವು ಹೊಟಿದೆ; ತನ್ನ ಗುರಿಯನ್ನು ಸಾಧಿಸಿದೆ.

**ವಿಷಯ ವಿವೇಚನೆಯು ಕ್ರಮಬದ್ಧವಾಗಿ ಸಾಗಿದೆ.** ಇದರಿಂದ ಹಿಂದೀ ವ್ಯಾಕರಣದ ವಿವಿಧ ಅಂಗಗಳನ್ನು ಸುಲಭವಾಗಿ ತಿಳಿದುಕೊಳ್ಳಬಹುದಾಗಿದೆ. ಮಕ್ಕಳ ಮಾತೃಭಾಷೆಯ ವಾಕರಣ ಜ್ಞಾನಕ್ಕೆ ಹೊಂದಿಕೆಯಾಗಿ ಇದನ್ನು ಸಾಗಿಸಿದ್ದು, ಈ ಹೊತ್ತಿಗೆಯ ವೈಶಿಷ್ಟ್ಯವೆಂದು ಹೇಳಬಹುದು. ಮಕ್ಕಳು

ಪ್ರಾಥಮಿಕ ಶಾಲೆಗಳ ೫, ೬ ಮತ್ತು ೭ನೆಯ ಇಯತ್ತೆಗಳ ಅಭ್ಯಾಸ ಪತ್ರಿಕೆಗೆ
ಅನುಸಾರವಾಗಿ ರಚಿಸಲ್ಪಟ್ಟಿರುತ್ತದೆ.



# आदर्श
# हिन्दी-कन्नड व्याकरण-I
# ಆದರ್ಶ ಹಿಂದಿ-ಕನ್ನಡ ವ್ಯಾಕರಣ-I



लेखक :

अ. हु. हुण्डेकार,
रा. भा. विशारद; H. S. S;
S. T. C. (Hindi); कन्नडजाण

और

म. हो. बेळलदवर,
रा. भा. विशारद; H. S.
S. T. C. (Hindi), कन्नडजा



प्रकाशक :

जयहिन्द प्रकाशन, धारवाड

# ಮುನ್ನುಡಿ

ಪ್ರತಿಯೊಂದು ಭಾಷೆಗೂ, ತನ್ನ ಗುಣ ಧರ್ಮಗಳಿಗೆ ಅನುಗುಣವಾಗಿ. ತನ್ನ ಬೇಕು ಬೇಡಗಳಿಗೆ ಅನುಗುಣವಾಗಿ, ತನ್ನದೇ ಆದ ಒಂದು ವ್ಯಾಕರಣ ಇದ್ದೇ ಇದೆ. ರೂಪರೇಷೆಗಳಲ್ಲಿ, ಗುಣಗಾತ್ರಗಳಲ್ಲಿ ಈ ವ್ಯಾಕರಣಗಳ ಬೇರೆ ಬೇರೆ ಯಾಗಿರುವದು ಸ್ವಾಭಾವಿಕ; ಅನಿವಾರ್ಯ. ಆದರೆ ಒಂದು ಭಾಷೆಯ ಮುಖಾಂತರ ಇನ್ನೊಂದು ಭಾಷೆಯನ್ನು ಕಲಿಯುವವರಿಗೆ ಮಾತ್ರ ಒಂದು ವಿಶಿಷ್ಟ ತರಗತಿಯ ವ್ಯಾಕರಣವನ್ನೇ ರಚಿಸಬೇಕಾಗುತ್ತದೆ. ಎರಡೂ ಭಾಷೆಗಳ ಮರ್ಮವನ್ನು ಅರಿತವರಿಗೆ ಮಾತ್ರ ಅದು ಸುಲಭಸಾಧ್ಯ. **ನುರಿತ ಹಿಂದಿ ಶಿಕ್ಷಕರೆಂದು ಹೆಸರಾದ** ಸರ್ವಶ್ರೀ. ಎ. ಎಚ್. ಹುಂಡೇಕಾರ ಹಾಗೂ ಎಮ್. ಎಚ್. ಬೆಳಲದವರ, ಅವರು ತಮ್ಮ ಅನುಭವದ ತಳಹದಿಯಮೇಲೆ ಎರಡೂ ಭಾಷೆಗಳ ದೃಷ್ಟಿಯನ್ನು ತಮ್ಮೆದುರಿಗಿಟ್ಟುಕೊಂಡು ಇದನ್ನು ರಚಿಸಿದ್ದಾರೆ. ಇದರಲ್ಲಿ ಕೇವಲ ಕಲ್ಪನಾ ವಿಲಾಸದಲ್ಲಿ ಕಟ್ಟಿದ ಪಾಠ್ಯಕ್ರಮವಿರದೆ ವರ್ಗಗಳಲ್ಲಿ ಪ್ರತ್ಯಕ್ಷವಾಗಿ ಅಳವಡಿಸಿಕೊಂಡ ಪದ್ಧತಿಯ ನಿರೂಪಣೆಯಿದೆ.

ಹಿಂದೀ ಭಾಷೆಯ ವೈಶಿಷ್ಟ್ಯವಾದ ನೆ ಪ್ರತ್ಯಯ ಹಾಗೂ ಲಿಂಗಭೇದ ಮೊದಲಾದವುಗಳನ್ನೂ ಕೂಲಂಕಷವಾಗಿ ಇಲ್ಲಿ ವಿವರಿಸಿದ್ದಾರೆ. ಸಾಮಾನ್ಯ ಭೂತಕಾಲದ ಸ್ತ್ರೀಲಿಂಗ ಬಹುವಚನದ ರೂಪಗಳು, ಪೂರ್ಣ ಹಾಗು ಆಸನ್ನ ಭೂತ-ಕಾಲಗಳಿಗೆ ಪರಿವರ್ತನೆ ಹೊಂದುವಾಗ ಕ್ರಿಯಾಪದಗಳ ಅನುಸ್ವಾರದಲ್ಲಿ ಆಗುವ ಬದಲಾವಣೆಯ ವಿವೇಚನೆ, ಮಾತನಾಡುವ ವಿಧಾನದಲ್ಲಿಯೆ ಪ್ರಶ್ನಾರ್ಥಕ ವಾಕ್ಯವನ್ನು ನಿರ್ಮಿಸುವ ರೀತಿಯ ವಿವರಣೆ, ಭವಿಷ್ಯತ ಕಾಲದಲ್ಲಿ ಈ ಮತ್ತು ಊ ಕಾರಾಂತ ಧಾತುಗಳಿಗೆ ಸ್ವರದಿಂದ ಆರಂಭವಾಗುವ ಪ್ರತ್ಯಯಗಳು ಹತ್ತುವಾಗ ಹಾಗೂ ವ್ಯಂಜನದಿಂದ ಆರಂಭವಾಗುವ ಪ್ರತ್ಯಯಗಳು ಹತ್ತುವಾಗ, ಧಾತುಗಳ ಅಂತ್ಯಸ್ವರದಲ್ಲಿ ಆಗುವ ಬದಲಾವಣೆಯ ಉಲ್ಲೇಖ ಮೊದಲಾದವುಗಳು ಈ ವ್ಯಾಕರಣದ ಉಪಯುಕ್ತತೆಯನ್ನು ಹೆಚ್ಚಿಸಿವೆ. ಅಲ್ಲಲ್ಲಿ ಬರುವ ಉದಾಹರಣೆಗಳಲ್ಲಿ ಈ ನಾಡಿಗೆ ವಿಶಿಷ್ಟವಾದ ಹಲವಾರು ಹೆಸರುಗಳನ್ನು ಬಳಸಿರುವುದು, ಇದರ ಜನಪ್ರಿಯತೆಗೆ ಒಂದು ಕಾರಣವಾಗುವದರಲ್ಲಿ ಸಂದೇಹವಿಲ್ಲ.

ಕೊರತೆ ಇತ್ತು. ಆ ಕೊರತೆಯನ್ನು ಈ "ಆದರ್ಶ ಹಿಂದಿ-ಕನ್ನಡ ವ್ಯಾಕರಣ-I" ಪೂರೈಸುವದಾಗಿ ಹಾರೈಸುತ್ತೇನೆ.

ಯು. ಬಿ. ಹಿಲ್
ಧಾರವಾಡ
೨೯-೫-೧೯೬೦

**ಆರ್. ಸಿ. ಭೂಸನೂರಮಠ,**
ಎಮ್. ಎ; ರಾ. ಭಾ. ವಿಶಾರದ.

---

# ನಮ್ಮ ನುಡಿ

ಭಾಷೆಯನ್ನು ಮೊದಲು ಕಲಿತು ನಂತರ ವ್ಯಾಕರಣ ಕಲಿಯುವ ಪದ್ಧತಿ ಯೇನೋ ಶ್ರೇಷ್ಠವಾದದ್ದೇಸರಿ. ಆದರೆ ಇದು ಮಾತೃಭಾಷೆಗೆ ಪರಿಮಿತ ಗೊಳ್ಳುವಂತಹ ಮಾತು. ಅನ್ಯ ಭಾಷೆಯನ್ನು, ಅದುಕೂಡ ಕೊಂಚ ಪ್ರಾಪ್ತ ವಯಸ್ಕ ವಿದ್ಯಾರ್ಥಿಗಳು ಕಲಿಯುವಾಗ ಭಾಷೆಗೆ ತಳಹದಿಯಾದ ವ್ಯಾಕರಣವು. ಆವಶ್ಯವಾಗಿ ಬೇಕಾಗುತ್ತದೆ ಈ ವ್ಯಾಕರಣ ತಳಹದಿ ಇಲ್ಲದ ಭಾಷಾಕಟ್ಟಡವು ಬಹುದಿನ ನಿಲ್ಲಲಾರದು. ಅಂತೆಯೇ ನಾವು ವ್ಯಾಕರಣವನ್ನು ಹಿಡಿದುಕೊಂಡೇ ಭಾಷಾಜ್ಞಾನದತ್ತ ನಾಗಿದ್ದೇವೆ.

ಪ್ರಾಥಮಿಕ ಶಾಲೆಗಳ ಅಭ್ಯಾಸಪತ್ರಿಕೆಯಲ್ಲಿ ಹೇಳಲಾದ ಪಾಠ್ಯ ಕ್ರಮ-ಕ್ಕನುಸಾರವಾಗಿ ಇಲ್ಲಿ ವಿಷಯನಿರೂಪಣೆಯಾಗಿದೆ. ಆದ್ದರಿಂದ ಪ್ರಾಥಮಿಕ ಶಾಲೆಗಳ ವಿದ್ಯಾರ್ಥಿಗಳು ಹಾಗು ಶಿಕ್ಷಕರು ಇದನ್ನು ಮೆಚ್ಚುವ ಭರವಸೆ ನಮಗಿದೆ. ಇದರ ಜೊತೆಗೆ ನಾವು ದ. ಭಾ. ಹಿಂ. ಪ್ರಚಾರ ಸಭೆ (ಮದ್ರಾಸ)ಯ **ಪ್ರಾಥಮಿಕ** ಪರೀಕ್ಷೆಯ ವಿದ್ಯಾರ್ಥಿಗಳಿಗೂ ಇದು ಉಪಯುಕ್ತವಾಗುವಂತೆ ಆದರ ಪಾಠ್ಯಕ್ರಮವನ್ನು ಇದರಲ್ಲಿ ಅಳವಡಿಸಿಕೊಂಡಿದ್ದೇವೆ. ಹೀಗಾಗಿ ನಮ್ಮೀ ಪುಸ್ತಕವು ಏಕಕಾಲಕ್ಕೆ ಎರಡು ಉದ್ದೇಶಗಳನ್ನು ಈಡೇರಿಸುವಂತಹ ದಾಗಿದೆ.

ಕಳೆದ ಹತ್ತು ವರ್ಷಗಳಿಂದ ಹಿಂದಿ ಪ್ರಚಾರಕ್ಷೇತ್ರದಲ್ಲಿ ಹಾಗು ಶಾಲೆಗಳಲ್ಲಿ

ದ್ದೇವೆ. ಆದರೂ ಸಹ ಇದರಲ್ಲಿ ಅಪೂರ್ಣತೆ ಇರಬಹುದಾಗಿದೆ; ಏಕೆಂದರೆ ಮಾನವನೇ ಪೂರ್ಣನಾಗಿಲ್ಲ. ಆದ್ದರಿಂದ ವಿಜ್ಞ ಶಿಕ್ಷಕರು ವಿಧಾಯಕ ಸಲಹೆ ಸೂಚನೆಗಳನ್ನು ಕಳಿಸಿದಲ್ಲಿ ನಾವು ಅವುಗಳನ್ನು ಸಹರ್ಷ ಸ್ವೀಕರಿಸುತ್ತೇವೆ.

ಈ ನಮ್ಮ ಪುಸ್ತಕವನ್ನು ಹಿಂದಿ-ಕನ್ನಡ-ಸಂಸ್ಕೃತ-ಇಂಗ್ಲಿಷ ಚತುರ್ಭಾಷಾ ಪರಿಣತರೂ, ಕವಿಗಳೂ ಹಾಗು ನಾಟಕಕಾರರೂ ಆದ **ಶ್ರೀಮಾನ್ ಆರ್. ಸಿ. ಭೂಸನೂರಮಠರವರು** ಆಮೂಲಾಗ್ರ ಪರೀಕ್ಷಿಸಿ ಸುಯೋಗ್ಯ ಮುನ್ನುಡಿ ಬರೆದು ಕೊಟ್ಟಿದ್ದಕ್ಕಾಗಿ ನಾವು ಉಪಕೃತರಾಗಿದ್ದೇವೆ. ನಮ್ಮ ಗುರುಗಳಾದ ಶ್ರೀಮಾನ್. ಶ್ರೀ. ಯ. ಶೀಲವಂತರವರು ಹಾಗು ಧಾರವಾಡ ನಗರ ಸಭೆಯ ಸ್ಕೂಲಬೋರ್ಡಿನ ಎ. ಓ. ರವರಾದ ಶ್ರೀಮಾನ್ ಎಸ್. ಎಮ್. ಮೇಗೂರರವರು ಅದರಂತೆ ಜನತಾಕಾಲೇಜಿನ ಪ್ರಾಧ್ಯಾಪಿಕೆಯರಾದ ಶ್ರೀಮತಿ ಸರೋಜಿನಿ ಮಹಿಷಿಯವರು, ಕರ್ನಾಟಕ ಪ್ರಾಂತೀಯ ಹಿಂದಿ ಪ್ರಚಾರ ಸಭೆಯ ಕಾರ್ಯಾಧ್ಯಕ್ಷರಾದ ಶ್ರೀಮಾನ್ ಎ. ವ್ಹಿ. ಕೌದಿ ಯವರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ ನಮ್ಮ ಈ ಕಾರ್ಯವನ್ನು ಪ್ರಶಂಸಿಸಿದ್ದಕ್ಕಾಗಿ ಅಭಿನಂದನೆಗಳನ್ನು ಸಲ್ಲಿಸುವದು ನಮ್ಮ ಧರ್ಮವಾಗಿದೆ. ಸದಾಹಸನ್ಮುಖಿಗಳಾದ ಶ್ರೀ. ಪಾಲೇಕರ ಮಂಗೇಶರಾಯರು ತೀವ್ರವಾಗಿ, ಅಂದವಾಗಿ ಮುದ್ರಿಸಿ ಕೊಟ್ಟು ನಮ್ಮ ಮೇಲೆ ಮಹದುಪಕಾರ ಮಾಡಿದ್ದಾರೆ. ಅವರನ್ನು ನಾವು ಎಷ್ಟು ಪ್ರಶಂಸಿಸಿದರೂ ಕಡಿಮೆಯೇ. ಎಷ್ಟು ಜಾಗರೂಕತೆ ವಹಿಸಿದರೂ ಕಣ್ಣು ತಪ್ಪಿಸಿ ಅಲ್ಲಲ್ಲಿ ಮುದ್ರಣದೋಷಗಳು ಉಳಿದುಕೊಂಡಿವೆ. ದ್ವಿತೀಯ ಮುದ್ರಣದಲ್ಲಿ ಅವುಗಳನ್ನು ನಾವು ಅವಶ್ಯವಾಗಿ ತಿದ್ದಿಕೊಳ್ಳುತ್ತೇವೆ. ಪಾಠಕರು ಈ ಬಗ್ಗೆ ನಮ್ಮನ್ನು ಕ್ಷಮಿಸುವಿರಾಗಿ ನಂಬುತ್ತೇವೆ.

ಶಿಕ್ಷಕರು ಹಾಗು ವಿದ್ಯಾರ್ಥಿಗಳು ಈ ಪುಸ್ತಕವನ್ನು ಆದರದಿಂದ ಸ್ವಾಗತಿಸಿ, ಈ ನಮ್ಮ ರಾಷ್ಟ್ರಭಾಷಾ ಪ್ರಚಾರಸೇವಾಕಾರ್ಯದಲ್ಲಿ ನೆರವಾಗಿ ಪ್ರೋತ್ಸಾಹಿಸುವರೆಂದು ನೆರೆನಂಬಿದ್ದೇವೆ. ಜೈಹಿಂದ ! ಜೈ ಹಿಂದಿ !!

ಲೇಖಕರು

# ಪರಿವಿಡಿ



---

ವಿ.ಸೂ:— 7, 31 ಮತ್ತು 32 ನೆಯ ಪಾಠಗಳು ಪ್ರಾಥಮಿಕ

आदर्श

# हिन्दी कन्नड व्याकरण-1

## पाठ 1

### अक्षर प्रकर्ण (ಅಕ್ಷರ ಪ್ರಕರ್ಣ)

**

### वर्णमाला (ವರ್ಣಮಾಲೆ)

ಹಿಂದಿ ಭಾಷೆಯ ವರ್ಣಮಾಲೆಯಲ್ಲಿ ಸ್ವರಗಳು 13 ಹಾಗು ವ್ಯಂಜನಗಳು 33 ಹೀಗೆ ಒಟ್ಟು 46 ಅಕ್ಷರಗಳಿರುತ್ತವೆ.

### स्वर (ಸ್ವರಗಳು)

अ आ इ ई उ ऊ ऋ ए ऐ ओ औ अं अः

ಅ ಆ ಇ ಈ ಉ ಊ ಋ ಏ ಐ ಓ ಔ ಅಂ ಅಃ

### वर्गीय व्यंजन (ವರ್ಗೀಯ ವ್ಯಂಜನಗಳು)

क ख ग घ ङ ('ಕ' ವರ್ಗ)

ಕ ಖ ಗ ಘ ಙ

च छ ज झ ञ ('ಚ' ವರ್ಗ)

ಚ ಛ ಜ ಝ ಞ

ट ठ ड ढ ण ('ಟ' ವರ್ಗ)

ಟ ಠ ಡ ಢ ಣ

त थ द ध न ('ತ' ವರ್ಗ)

ತ ಥ ದ ಧ ನ

**प फ ब भ म** ('ಪ' ವರ್ಗ)
ಪ ಫ ಬ ಭ ಮ

## अवर्गीय व्यंजन (ಅವರ್ಗೀಯ ವ್ಯಂಜನಗಳು)

**य र ल व श ष स ह**
ಯ ರ ಲ ವ ಶ ಷ ಸ ಹ

ಹಿಂದಿ ಭಾಷೆಯ ವರ್ಣಮಾಲೆಯಲ್ಲಿ 'ಳ' ಇಲ್ಲ; ಆದರೂ ಇತ್ತೀಚೆಗೆ ಇದರ ಉಪಯೋಗ ಮಾಡಹತ್ತಿದ್ದಾರೆ. ಉದಾ:- बेळगाँव । क्ष, त्र, ज्ञ ಇವು ಸಂಯುಕ್ತಾಕ್ಷರ (ಒತ್ತಕ್ಷರ) ಗಳಾಗಿದ್ದುದರಿಂದ ವರ್ಣಮಾಲೆಯಲ್ಲಿ ಎಣಿಸ್ಪಡುವದಿಲ್ಲ. ಇವುಗಳನ್ನು क्ष, त्र, ज्ञ ಹೀಗೆ ಬರೆಯುತ್ತಾರೆ.

## बारहखडी (ಗುಣಿತಾಕ್ಷರಗಳು)

ಗುಣಿತಾಕ್ಷರಗಳ ಅಥವಾ ಬಳ್ಳಿಗಳ ರಚನೆಯ ಅನುಕೂಲಕ್ಕಾಗಿ ಈ ಕೆಳಗಿನಂತೆ ಸ್ವರಗಳನ್ನು ರಚಿಸಿ ಅವುಗಳ ಚಿಹ್ನಗಳನ್ನು ಉಪಯೋಗಿಸುತ್ತಾರೆ.

अ आ इ ई उ ऊ ऋ ए ऐ ओ औ अं अ:
ಅ ಆ ಇ ಈ ಉ ಊ ಋ ಎ ಐ ಒ ಔ ಅಂ ಅಃ

## स्वरचिह्न (ಸ್ವರ ಚಿಹ್ನಗಳು)

| ಅ | ಆ | ಇ | ಈ | ಉ | ಊ | ಋ | ಎ | ಐ | ಒ | ಔ | ಅಂ | ಅಃ |
|---|---|---|---|---|---|---|---|---|---|---|---|---|
| — | ा | ि | ी | ु | ू | ृ | े | ै | ो | ौ | ं | : |

ವಿ. ಸೂ.- 1) अ, झ, ण, ल, श, क्ष ಈ ಅಕ್ಷರಗಳನ್ನು ಕ್ರಮವಾಗಿ अ, झ, ण, ल, श (श), क्ष ಈ ರೀತಿಯೂ ಬರೆಯುತ್ತಾರೆ.
2) ಹಿಂದಿಯಲ್ಲಿ ಎ, ಒ ಗಳೆಂಬ ಹ್ರಸ್ವ ಸ್ವರಗಳಿರುವದಿಲ್ಲ.

ಈ ಸ್ವರ ಚಿಹ್ನಗಳಿಂದ ಕೆಳಗಿನಂತೆ ಬಳ್ಳಿಗಳನ್ನು ರಚಿಸುತ್ತಾರೆ.

| | | | | | | | | | | | | |
|---|---|---|---|---|---|---|---|---|---|---|---|---|
| क | का | कि | की | कु | कू | कृ | के | कै | को | कौ | कं | कः |
| ಕ | ಕಾ | ಕಿ | ಕೀ | ಕು | ಕೂ | ಕೃ | ಕೇ | ಕೈ | ಕೋ | ಕೌ | ಕಂ | ಕಃ |
| ग | गा | गि | गी | गु | गू | गृ | गे | गै | गो | गौ | गं | गः |
| ಗ | ಗಾ | ಗಿ | ಗೀ | ಗು | ಗೂ | ಗೃ | ಗೇ | ಗೈ | ಗೋ | ಗೌ | ಗಂ | ಗಃ |
| द | दा | दि | दी | दु | दू | दृ | दे | दै | दो | दौ | दं | दः |
| ದ | ದಾ | ದಿ | ದೀ | ದು | ದೂ | ದೃ | ದೇ | ದೈ | ದೋ | ದೌ | ದಂ | ದಃ |
| च | चा | चि | ची | चु | चू | चृ | चे | चै | चो | चौ | चं | चः |
| ಚ | ಚಾ | ಚಿ | ಚೀ | ಚು | ಚೂ | ಚೃ | ಚೇ | ಚೈ | ಚೋ | ಚೌ | ಚಂ | ಚಃ |
| श | शा | शि | शी | शु | शू | शृ | शे | शै | शो | शौ | शं | शः |
| ಶ | ಶಾ | ಶಿ | ಶೀ | ಶು | ಶೂ | ಶೃ | ಶೇ | ಶೈ | ಶೋ | ಶೌ | ಶಂ | ಶಃ |

## संयुक्ताक्षर (ಒತ್ತಕ್ಷರಗಳು)

क, ग, च, त ಇತ್ಯಾದಿ ಅಕ್ಷರಗಳಲ್ಲಿ ಕಂಡು ಬರುವ । ಈ ಉದ್ದನೆಯ ಚಿಹ್ನಕ್ಕೆ पाई ಅನ್ನುತ್ತಾರೆ. ಈ पाई ಯನ್ನನು- ಲಕ್ಷಿಸಿ ವ್ಯಂಜನಗಳನ್ನು ಮೂರು ಪ್ರಕಾರಗಳಲ್ಲಿ ವಿಂಗಡಿಸಬಹುದು. (1) पाई ಮಧ್ಯದಲ್ಲಿದ್ದ ವ್ಯಂಜನಗಳು, ಉದಾ:- क, फ (2) पाई ಕೊನೆಯಲ್ಲಿದ್ದ ವ್ಯಂಜನಗಳು, ಉದಾ:- त, य, श ಇತ್ಯಾದಿ. (3) पाई ಇಲ್ಲದ ವ್ಯಂಜನಗಳು, ಉದಾ- छ, ट, ठ, ड, ढ, द, र, ह, ळ।

---

ವಿ. ಸೂ:- र ದ ಬಳ್ಳಿಯನ್ನು ರಚಿಸುವಾಗ ಉ, ಊ ಕಾರವನ್ನು रु, रू ಈ ರೀತಿ ಬರೆಯದೆ रु (ರು) रू (ರೂ) ಈ ರೀತಿ ಬರೆಯುತ್ತಾರೆ.

ಕನ್ನಡ ಮತ್ತು ಹಿಂದಿಯಲ್ಲಿ ಸಂಯುಕ್ತಾಕ್ಷರಗಳನ್ನು ಬರೆಯುವ ಪದ್ಧತಿಗಳು ಭಿನ್ನ ಭಿನ್ನವಾಗಿರುತ್ತವೆ. ಕನ್ನಡ ಒತ್ತಕ್ಷರದಲ್ಲಿ ಮೊದಲು ಉಚ್ಚರಿಸುವ ಅಕ್ಷರವನ್ನು ಪೂರ್ಣವನ್ನಾಗಿಯೂ ಉಳಿದ ಅಕ್ಷರ ಅಥವಾ ಅಕ್ಷರಗಳನ್ನು ಒತ್ತುಗಳನ್ನಾಗಿ ಮಾರ್ಪಡಿಸಿ ಬರೆಯುತ್ತಾರೆ. ಉದಾ:_ ಪುಸ್ತಕ, ಸಂಸ್ಕೃತ. ಆದರೆ ಹಿಂದಿಯಲ್ಲಿ ಮೊದಲು ಉಚ್ಚರಿಸುವ ಅಕ್ಷರವನ್ನು ಅಥವಾ ಅಕ್ಷರಗಳನ್ನು ಅರ್ಧವನ್ನಾಗಿಯೂ ಕೊನೆಗೆ ಉಚ್ಚರಿಸುವ ಅಕ್ಷರವನ್ನು ಪೂರ್ಣವನ್ನಾಗಿಯೂ ಬರೆಯುತ್ತಾರೆ. ಉದಾ: - पुस्तक, संस्कृत ।

पाई ಮಧ್ಯದಲ್ಲಿರುವ ಅಕ್ಷರಗಳು ಸಂಯುಕ್ತಾಕ್ಷರಗಳಲ್ಲಿ ಮೊದಲನೆಯ ಅಕ್ಷರಗಳಾಗಿ ಬಂದರೆ ಆ ಅಕ್ಷರಗಳ पाई ಯ ಮುಂದಿನ ಅಲ್ಪಾಂಶವು ನಷ್ಟವಾಗುತ್ತದೆ.

| | | |
|---|---|---|
| ಉದಾ:— | क + य = क्या | क्या |
| | क + त = क्त | रक्त |
| | फ + त = फ्त | हफ्ता |
| | फ + ल = फ्ल | फ्लारेन्स |

पाई ಕೊನೆಯಲ್ಲಿದ್ದ ಅಕ್ಷರಗಳು ಸಂಯುಕ್ತಾಕ್ಷರಗಳಲ್ಲಿ ಮೊದಲನೆಯ ಅಕ್ಷರಗಳಾಗಿ ಬಂದರೆ ಆ ಅಕ್ಷರಗಳ पाई ಲೋಪವಾಗುತ್ತದೆ.

| | | |
|---|---|---|
| ಉದಾ:— | ग + न = ग्न | लग्न |
| | स + ज = स्ज | मस्जिद |
| | ष + ट = ष्ट | कष्ट |
| | न + न = न्न | अन्न (अन्न) |

ख + त = ख्त सख्त

घ + न = घ्न विघ्न (विघ्न)

पाई इಲ್ಲದ ಅಕ್ಷರಗಳು ಸಂಯುಕ್ತಾಕ್ಷರಗಳಲ್ಲಿ ಮೊದಲನೆಯ ಅಕ್ಷರಗಳಾಗಿ ಬಂದರೆ ಆ ಅಕ್ಷರಗಳನ್ನು ವ್ಯಂಜನವನ್ನಾಗಿ ಬರೆಯುತ್ತಾರೆ. ವ್ಯಂಜನದ ಚಿಹ್ನವು ( ् ) ಈ ರೀತಿಯಾಗಿರುತ್ತದೆ. ಇದನ್ನು ಅಕ್ಷರದ ಕೆಳಗೆ ಕೊಡುತ್ತಾರೆ. ಇದಕ್ಕೆ हल् ಅನ್ನುತ್ತಾರೆ. ಉದಾ:- ट् = ಟ್, ड् = ಡ್, त् = ತ್ ಇತ್ಯಾದಿ.

ड + ग = ड्ग खड्ग

ड + ड = ड्ड अड्डा

ट + ठ = ट्ठ चिट्ठी

ट + ट = ट्ट टट्टू

ಈ ಮೇಲಿನ ಸಂಯುಕ್ತಾಕ್ಷರಗಳನ್ನು ಕನ್ನಡದಂತೆ ಒಂದರ ಕೆಳಗೊಂದು ಬರೆಯುವ ರೂಢಿಯೂ ಉಂಟು. ಉದಾ:- खड्ग, अड्डा, चिट्ठी ಇತ್ಯಾದಿ. ಕೆಲವು ಸಂಯುಕ್ತಾಕ್ಷರಗಳು ಈ ಕೆಳಗಿನಂತೆಯೂ ಬರೆಯಲ್ಪಡುತ್ತವೆ.

द + द = द्द भद्दा

द + ध = द्ध बुद्ध

क + त = क्त रक्त (रक्त)

त + त = त्त चित्त (चित्त)

ह + व = ह्व आह्वान

द + व = द्व विद्वान

ರ ವು ಸಂಯುಕ್ತಾಕ್ಷರಗಳಲ್ಲಿ ಬರೆಯಲ್ಪಡುವಾಗ ಅದು ಭಿನ್ನಭಿನ್ನ ಕಡೆಗಲ್ಲಿ ( ॑ / ् ) ಈ ಪ್ರಕಾರ ಮೂರು ಚಿಹ್ನಗಳ ರೂಪ ತಾಳುತ್ತದೆ.

(1) ಸಂಯುಕ್ತಾಕ್ಷರಗಳಲ್ಲಿ ರ ದ ಉಚ್ಚಾರವು ಮೊದಲಾಗುತ್ತಿದ್ದರೆ ಅದು ( ॑ ) ಈ ರೂಪವನ್ನು ತಾಳಿ ಸಂಯುಕ್ತಾಕ್ಷರದ ಅಂತ್ಯಾಕ್ಷರದಮೇಲೆ ಬರುತ್ತದೆ.

| | | |
|---|---|---|
| ಉದಾ:— | र + फ = र्फ | बर्फ |
| | र + य = र्य | सूर्य |
| | र + ज = र्ज | अर्जुन |
| | र + ग = र्ग | स्वर्ग |
| | र + ड = र्ड | कार्ड |
| | र + त + य = र्त्य | मर्त्य |

(2) ಸಂಯುಕ್ತಾಕ್ಷರಗಳಲ್ಲಿ ರ ದ ಉಚ್ಚಾರವು ಅಂತ್ಯದಲ್ಲಾದರೆ ಅದು (/) ಈ ರೂಪವನ್ನು ತಾಳಿ ಪಾಈಗೆ ಕೂಡುತ್ತದೆ.

| | | |
|---|---|---|
| ಉದಾ:— | ग + र = ग्र | अग्र |
| | क + र = क्र | फिक्र |
| | भ + र = भ्र | भ्रमर |
| | त + र = त्र | पत्र |
| | म + र = म्र | नम्र |
| | द + र = द्र | द्रव |

ವಿ. ಸೂ:— द ಇದು ಪಾಈ ಇಲ್ಲದ ಅಕ್ಷರವಾಗಿದ್ದರೂ ರ ದ ಚಿಹ್ನವು ಪಾಈಯುಳ್ಳ ಅಕ್ಷರಗಳಿಗೆ ಕೂಡುವಂತೆ ಕೂಡುತ್ತದೆ. ಉದಾ:- चंद्र.

ಪಾಈ ಇಲ್ಲದ ಸಂಯುಕ್ತಾಕ್ಷರಗಳಲ್ಲಿ र ದ ಉಚ್ಚಾರವು ಅಂತ್ಯದಲ್ಲಾದರೆ ಅದು ( ‸ ) ಈ ರೂಪವನ್ನು ತಾಳಿ ಅಕ್ಷರದ ಕೆಳಗೆ ಬರುತ್ತದೆ.

ಉದಾ:— ड + र = ड्र ड्रम

ट + र = ट्र ट्रंक

ष + ट + र = ष्ट्र राष्ट्र

ಹಿಂದಿಯಲ್ಲಿ ಅನುಸ್ವಾರ (०) ಪ್ರಕಟಪಡಿಸಲು ಒಂದು ಚುಕ್ಕೆ (·) ಯನ್ನು ಅಕ್ಷರದ ಮೇಲೆ ಕೊಡುತ್ತಾರೆ. ಉದಾ:- कंगन, संदल, ढंग, ठंडा, ढोंगी, बैंगन।

ಅನುಸ್ವಾರಯುಕ್ತ ಶಬ್ದದಲ್ಲಿ ಅನುಸ್ವಾರದ ಮುಂದಿನ ಅಕ್ಷರವು ಯಾವದೇ ವರ್ಗೀಯ ವ್ಯಂಜನದ ಅಕ್ಷರವಾಗಿದ್ದರೆ, ಆ ವರ್ಗದ ಅನುನಾಸಿಕ ಅಕ್ಷರವನ್ನು ಅರ್ಧವನ್ನಾಗಿಮಾಡಿ ಅನುಸ್ವಾರದ ಬದಲಾಗಿ ಉಪಯೋಗಿಸುತ್ತಾರೆ. ಉದಾ:- अंग = अङ्ग, चंचल=चञ्चल, डंडा=डण्डा, हिंदी=हिन्दी, हंपी=हम्पी।

ಹಿಂದಿಯಲ್ಲಿ ಅರ್ಧ ಅನುಸ್ವಾರವೊಂದಿದೆ. ಅದನ್ನು (ँ) ಹೀಗೆ ಬರೆಯುತ್ತಾರೆ. ಅದಕ್ಕೆ ಅರ್ಧಚಂದ್ರಬಿಂದುವೆನ್ನುತ್ತಾರೆ. ಇದು ಉಪಯೋಗಿಸಲ್ಪಟ್ಟಾಗ ಇದರ ಉಚ್ಚಾರವು ಅನುಸ್ವಾರದಂತೆ ಕೇವಲ ಮೂಗಿನಿಂದಾಗದೆ ಮೂಗು ಮತ್ತು ಬಾಯಿಯಿಂದ ಏಕ ಕಾಲಕ್ಕೆ ಆಗುತ್ತದೆ. ಉದಾ:- कहाँ, जहाँ, चाँद, हँस, पहुँच।

ವಿಸರ್ಗ (:) ವನ್ನು ಪ್ರಕಟಪಡಿಸುವ ರೀತಿಯು ಕನ್ನಡದಂತೆಯೇ ಹಿಂದಿಯಲ್ಲಿಯೂ ಇರುತ್ತದೆ. ಉದಾ:- प्रात:काल (ಪ್ರಾತಃಕಾಲ), अंत:करण (ಅಂತಃಕರಣ) ಇತ್ಯಾದಿ.

---

## पाठ 2

### वाक्य (ವಾಕ್ಯಗಳು)

ಅರ್ಥ ಪೂರ್ಣವಾಗುವಂತಹ ಶಬ್ದಗಳ ಸಮೂಹಕ್ಕೆ ವಾಕ್ಯ ವೆನ್ನುತ್ತಾರೆ. ಉದಾ:-

(1) शांता रसोई बनाती है। ಶಾಂತಾ ಅಡಿಗೆ ಮಾಡುತ್ತಾಳೆ.

(2) प्रेमा कहानी पढती है।

ಪ್ರೇಮಾ ಕಥೆಯನ್ನು ಓದುತ್ತಾಳೆ.

(3) मोहन रोटी खाता है।

ಮೋಹನನು ರೊಟ್ಟಿಯನ್ನು ತಿನ್ನುತ್ತಾನೆ.

ಕನ್ನಡದಂತೆ ಹಿಂದಿ ಭಾಷೆಯಲ್ಲಿಯೂ ಕ್ರಮವಾಗಿ ಕರ್ತೃ, ಕರ್ಮ, ಕ್ರಿಯಾಪದಗಳು ಬರುತ್ತವೆಂಬುದನ್ನು ಮೇಲಿನ ವಾಕ್ಯಗಳಲ್ಲಿ ನೋಡಬಹುದು; ಆದರೆ ಅಕರ್ಮಕ ಕ್ರಿಯಾಪದದ ವಾಕ್ಯಗಳಲ್ಲಿ ಕರ್ಮಪದವಿರುವದಿಲ್ಲವೆಂಬುದನ್ನು ಗಮನಿಸಬೇಕು. ಉದಾ:-

(1) सोमशेखर स्कूल जाता है।

ಸೋಮಶೇಖರನು ಶಾಲೆಗೆ ಹೋಗುತ್ತಾನೆ.

(2) मीनाक्षी हँसती है। ಮೀನಾಕ್ಷಿ ನಗುತ್ತಾಳೆ.

(3) श्यामला दौडती है। ಶ್ಯಾಮಲಾ ಓಡುತ್ತಾಳೆ.

### संज्ञा और सर्वनाम (ನಾಮ ಮತ್ತು ಸರ್ವನಾಮಗಳು)

ವಸ್ತುಗಳ ಹೆಸರುಗಳಿಗೆ **ನಾಮ** (**संज्ञा**) ಗಳೆನ್ನುತ್ತಾರೆ. ಉದಾ:- घर-ಮನೆ, बैल-ಎತ್ತು, पत्थर-ಕಲ್ಲು, आकाश-ಆಕಾಶ, मोहन-ಮೋಹನ, ಇತ್ಯಾದಿ.

ನಾಮಗಳ ಬದಲಾಗಿ ಅದೇ ಅರ್ಥವನ್ನು ಕೊಡುವ ಶಬ್ದಗಳಿಗೆ ಸರ್ವನಾಮಗಳೆನ್ನುತ್ತಾರೆ. ಉದಾ:- मैं, हम, तू, तुम ಇತ್ಯಾದಿ.

## सर्वनाम (ಸರ್ವನಾಮಗಳು)

| | ಏಕವಚನ | ಬಹುವಚನ |
|---|---|---|
| **प्रथम पुरुष** | मैं ನಾನು | हम ನಾವು |
| **द्वितीय पुरुष** | तू ನೀನು | तुम ನೀವು<br>आप ತಾವು |
| **तृतीय पुरुष** | वह ಅವನು, ಅವಳು, ಅದು, ಆ | वे ಅವರು, ಅವು, ಆ |
| | यह ಇವನು, ಇವಳು, ಇದು, ಈ | ये ಇವರು, ಇವು, ಈ |

ಕನ್ನಡದಂತೆ ಹಿಂದಿ ಭಾಷೆಯಲ್ಲಿಯೂ (1) ವರ್ತಮಾನ ಕಾಲ (2) ಭೂತಕಾಲ (3) ಭವಿಷ್ಯತ್ಕಾಲ, ಹೀಗೆ ಮೂರು ಮುಖ್ಯ ಕಾಲಗಳುಂಟು. ವರ್ತಮಾನಕಾಲದ ಕ್ರಿಯಾಪದಗಳ ರಚನೆಗಾಗಿ हो-ಆಗು ಎಂಬ ಸಹಾಯಕ ಧಾತುವಿನ ವರ್ತಮಾನ ಕಾಲದ ರೂಪಗಳನ್ನು ತಿಳಿದುಕೊಳ್ಳುವದು ಅವಶ್ಯವಾಗಿರುತ್ತದೆ. ಅವು ಈ ಕೆಳಗಿನಂತಿರುತ್ತವೆ.

| ಏಕವಚನ | ಬಹುವಚನ |
|---|---|
| मैं हूँ। ನಾನು ಇರುತ್ತೇನೆ. | हम हैं। ನಾವು ಇರುತ್ತೇವೆ. |
| तू है। ನೀನು ಇರುತ್ತೀ. | तुम हो। ನೀವು ಇರುತ್ತೀರಿ.<br>आप हैं। ತಾವು ಇರುತ್ತೀರಿ. |
| वह है। ಅವನು ಇರುತ್ತಾನೆ.<br>ಅವಳು, ಇರುತಾಳೆ.<br>ಅದು ಇರುತ್ತದೆ. | वे हैं। ಅವರು ಇರುತ್ತಾರೆ.<br>ಅವು ಇರುತ್ತವೆ. |

यह है। { ಇವನು ಇರುತ್ತಾನೆ. / ಇವಳು ಇರುತ್ತಾಳೆ. / ಇದು ಇರುತ್ತದೆ. } ये हैं। { ಇವರು ಇರುತ್ತಾರೆ. / ಇವು ಇರುತ್ತವೆ. }

### ಅಭ್ಯಸನಗಳು

(अ) ಕಂಸಿನಲ್ಲಿ ಕೊಟ್ಟಿರುವ ಶಬ್ದಗಳಲ್ಲಿ ಯೋಗ್ಯವಾದುದನ್ನು ಉಪಯೋಗಿಸಿ ವಾಕ್ಯಗಳನ್ನು ಪೂರ್ಣಗೊಳಿಸಿರಿ.

1) ——कहाँ खेलते हो ? (हम, मैं, तुम)
2) —— चूहे पकडती है। (बिल्ली, गधा, शेर)
3) _____सबेरे पाँच बजे अुठता हूँ। (वामन, वे, मैं)
4) शशिकला——सुनती है। (कहानी,नाटक,सिनेमा)
5) गिरिजा दूकान से——लाती है। (खेत,शक्कर,पेड)
6) पिताजी——पढते हैं। (पत्थर,कुरसी,अखबार)
7) शकुंतला नदी में ——। (नहा, सो, पढ)
8) हम आज बेंगलूर——। (हँस, अुड, जा)
9) मैदान में लडके——। (पी, खेल, गिर)
10) माँ रोटी——। (बन, बना, कर)

### ಕಠಿಣ ಶಬ್ದಾರ್ಥಗಳು

चूहा (ಪು)*–ಇಲಿ; पकड–ಹಿಡಿ; शेर(ಪು)–ಹುಲಿ ಅಥವಾ ಸಿಂಹ; सबेरे–ಬೆಳಗಿನಲ್ಲಿ; कहानी (ಸ್ತ್ರೀ)–ಕತೆ; दूकान (ಸ್ತ್ರೀ)-

* ಈ ಪುಸ್ತಕದಲ್ಲಿ ಪುಲ್ಲಿಂಗ ಶಬ್ದಗಳ ಮುಂದೆ 'ಪು' ಎಂದೂ ಸ್ತ್ರೀಲಿಂಗ ಶಬ್ದಗಳ ಮುಂದೆ 'ಸ್ತ್ರೀ' ಎಂದೂ ಬರೆಯಲಾಗಿದೆ.

ಅಂಗಡಿ; शक्कर (स्त्री)–ಸಕ್ಕರಿ; पढना†–ಓದುವದು; पत्थर–ಕಲ್ಲು; अखबार (पु)–ವರ್ತಮಾನಪತ್ರ; नहाना–ಸ್ನಾನಮಾಡುವದು; रोना–ಅಳುವದು; उडना–ಹಾರುವದು; हँसना–ನಗುವದು; मैदान (पु)–ಬಯಲು; खेलना–ಆಡುವದು; बनना–ಆಗುವದು; बनाना–ಮಾಡುವದು.

## (ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಮಲ್ಲಿಕಾರ್ಜುನನು ದಿನಾಲು ಶಾಲೆಗೆ ಹೋಗುತ್ತಾನೆ. (2) ಮಹಾದೇವಪ್ಪನವರು ವರ್ತಮಾನ ಪತ್ರವನ್ನು ಓದುತ್ತಾರೆ. (3) ಶಾಲೆಯಲ್ಲಿ ಹುಡುಗರುಅಭ್ಯಾಸ ಮಾಡುತ್ತಾರೆ. (4) ಬೆಂಗಳೂರು ದೊಡ್ಡ ಪಟ್ಟಣವಾಗಿರುತ್ತದೆ. (5) ಗೀತಾ ನೃತ್ಯಮಾಡುತ್ತಾಳೆ. (6) ಗೋಳಗುಮ್ಮಟ ವಿಜಾಪುರದಲ್ಲಿರುತ್ತದೆ. (7) ಪರಿಮಳಾ ಪತ್ರ ಬರೆಯುತ್ತಾಳೆ. (8) ಕಾಂಚನಮಾಲಾ ಹಾಡುತ್ತಾಳೆ. (9) ಎತ್ತುಗಳು ನೀರು ಕುಡಿಯುತ್ತವೆ. (10) ಅವರು ಧಾರವಾಡದಲ್ಲಿ ಇರುತ್ತಾರೆ.

## ಕಠಿಣ ಶಬ್ದಾರ್ಥಗಳು

ದಿನಾಲು–रोज; ಪಟ್ಟಣ–शहर (पु); ನೃತ್ಯಮಾಡುವದು–नाचना; ಪತ್ರ–खत (पु); ಹಾಡುವದು–गाना; ಎತ್ತುಗಳು–बैल; ಕುಡಿಯುವದು–पीना ।

---

† ಈ ಪುಸ್ತಕದಲ್ಲಿ ಧಾತುಗಳ ಅರ್ಥವನ್ನು ಹೇಳುವಾಗ ಅವುಗಳ ಮುಂದೆ ना ಹಚ್ಚಿ ಹೇಳಲಾಗಿದೆ.

# पाठ 3

## आज्ञार्थकरूप (ಆಜ್ಞಾರ್ಥಕ ರೂಪಗಳು)

ಆಜ್ಞಾರ್ಥವೆಂದರೆ 'ಅಪ್ಪಣೆಕೊಡು' ಎಂದು ಅರ್ಥವಾಗುತ್ತದೆ. ಇದರ ರೂಪಗಳು ದ್ವಿತೀಯ ಪುರುಷ ಸರ್ವನಾಮ तू, तुम, आप ಗಳಿಗೆ ಮಾತ್ರ ಅನ್ವಯಿಸುತ್ತವೆ. ಇದರ ರೂಪಗಳಿಂದ ಲಿಂಗಜ್ಞಾನವಾಗುವದಿಲ್ಲ.

ಕ್ರಿಯಾಪದದ ಮೂಲರೂಪಕ್ಕೆ धातु (ಧಾತು) ಅನ್ನುತ್ತಾರೆ. ಉದಾ:—करते हैं, जायेंगे, पी रहे हैं—ಇವುಗಳಲ್ಲಿ ಕ್ರಮವಾಗಿ कर, जा, पी ಇವು ಧಾತುಗಳು ಇರುತ್ತವೆ.

तू ಕರ್ತೃವಾಗಿದ್ದಾಗ ಧಾತುಗಳೇ ಆಜ್ಞಾರ್ಥಕ ಕ್ರಿಯಾಪದಗಳಾಗುತ್ತವೆ. ಉದಾ:— तू जा। ನೀನು ಹೋಗು; तू घर चल। ನೀನು ಮನೆಗೆ ನಡೆ ಇತ್ಯಾದಿ.

तुम ಕರ್ತೃವಾಗಿದ್ದಾಗ ಧಾತುಗಳಿಗೆ ओ ಜೋಡಿಸುವದರಿಂದ ಆಜ್ಞಾರ್ಥಕ ಕ್ರಿಯಾಪದಗಳಾಗುತ್ತವೆ. ಉದಾ:— तुम आओ। ನೀವು ಬನ್ನಿರಿ; तुम सिखाओ। ನೀವು ಕಲಿಸಿರಿ; तुम सोओ। ನೀವು ಮಲಗಿರಿ. ಆದರೆ अ ಕಾರಾಂತ ಧಾತುಗಳಿಗೆ ओ ಕೂಡುವಾಗ ಧಾತುವಿನ ಅಂತ್ಯ अ ಸ್ವರವು ಲೋಪವಾಗುತ್ತದೆ. ಉದಾ:— उठ्+अ+ओ=उठो; लिख्+अ+ओ=लिखो। ಇಲ್ಲಿ अ ಸ್ವರವು ಲೋಪವಾಗಿದೆ.

ई, ऊ ಕಾರಾಂತ ಧಾತುಗಳಿಗೆ ओ ಕೂಡುವಾಗ ಅವು ಹ್ರಸ್ವವಾಗುತ್ತವೆ. ಉದ:— पी + ओ = पिओ ಕುಡಿಯಿರಿ; छू + ओ = छूओ ಮುಟ್ಟಿರಿ ಇತ್ಯಾದಿ.

आप कर्तೃವಾಗಿದ್ದಾಗ ಧಾತುಗಳಿಗೆ अिये ಜೋಡಿಸುವದರಿಂದ ಆಜ್ಞಾರ್ಥಕ ಕ್ರಿಯಾಪದಗಳಾಗುತ್ತವೆ. ಉದಾ:— आप लाअिये । ತಾವು ತನ್ನಿರಿ; आप धोअिये । ತಾವು ಒಗೆಯಿರಿ. ಆದರೆ अ ಕಾರಾಂತ ಧಾತುಗಳಿಗೆ अिये ಕೂಡುವಾಗ ಧಾತುವಿನ ಅಂತ್ಯ अ ಸ್ವರವು ಲೋಪವಾಗುತ್ತದೆ. ಉದಾ:- देख्+अ+अिये=देखिये; सुन्+अ+अिये=सुनिये । ಇಲ್ಲಿ अ ವು ಲೋಪವಾಗಿದೆ.

दे, ले, पी, कर ಇವು ಅಪವಾದ ಧಾತುಗಳಾಗಿದ್ದುದರಿಂದ ಆಜ್ಞಾರ್ಥಕದಲ್ಲಿ ಈ ರೀತಿ ಬದಲಾವಣೆಗಳಾಗುತ್ತವೆ.

| | | |
|---|---|---|
| तू दे । | तुम दो । | आप दीजिये । |
| ನೀನು ಕೊಡು. | ನೀವು ಕೋಡಿರಿ. | ತಾವು ಕೊಡಿರಿ. |
| तू ले । | तुम लो । | आप लीजिये । |
| ನೀನುತೆ ಗೆದುಕೊಳ್ಳು. | ನೀವು ತೆಗೆದುಕೊಳ್ಳಿರಿ. | ತಾವು ತೆಗೆಮುಕೊಳ್ಳಿರಿ. |
| तू पी । | तुम पिओ । | आप पीजिये । |
| ನೀನು ಕುಡಿ. | ನೀವು ಕುಡಿಯಿರಿ. | ತಾವು ಕುಡಿಯಿರಿ. |
| तू कर । | तुम करो । | आप कीजिये । |
| ನೀನು ಮಾಡು. | ನೀವು ಮಾಡಿರಿ. | ತಾವು ಮಾಡಿರಿ. |

ಆಜ್ಞಾರ್ಥಕ ರೂಪಗಳಲ್ಲಿ ನಿಷೇಧವನ್ನು ಸೂಚಿಸುವಾಗ ಧಾತುವಿನ ಪೂರ್ವದಲ್ಲಿ मत (ಬೇಡ) ಉಪಯೋಗಿಸಬೇಕು. ಉದಾ:— तू मत रो । ನೀನು ಅಳಬೇಡ, तुम बुरा काम मत करो । ನೀವು ಕೆಟ್ಟ ಕೆಲಸ ಮಾಡಬೇಡಿರಿ. आप जमीनपर मत बैठिये । ತಾವು ನೆಲದಮೇಲೆ ಕುಳಿತುಕೊಳ್ಳಬೇಡಿರಿ.

ಹಿಂದಿ ಭಾಷೆಯಲ್ಲಿ तू* ಇದರ ಉಪಯೋಗವು ಬಾಲಕರಿಗಾಗಿ, ಆಳುಹೋಳುಗಳಿಗಾಗಿ, ಸಲಿಗೆಯವರಿಗಾಗಿ ಮತ್ತು ದೇವರಿ

*'ನೀನು' ಇದರ ಭಾಷಾಂತರ ಹಿಂದಿಯಲ್ಲಿ ಸಾಮಾನ್ಯವಾಗಿ तुम ಎಂದು ಮಾಡಬೇಕು.

ಗಾಗಿ ಆಗುತ್ತದೆ. ಆದರೂ ಇದರ ಉಪಯೋಗವು ಅಪರೂಪವೆಂದೇ ಹೇಳಬಹುದು. तुम ಇದರ ಉಪಯೋಗವು ಸರಿಸಮಾನರಿಗಾಗಿ ಹಾಗು आप ಇದರ ಉಪಯೋಗವು ಗೌರವ ಪ್ರಕಟಪಡಿಸುವದರ ಸಲುವಾಗಿ ಆಗುತ್ತದೆ.

### ಅಭ್ಯಾಸಗಳು

(अ) ಕಂಸಿನಲ್ಲಿ ಕೊಟ್ಟಿರುವ ಧಾತುಗಳಲ್ಲಿ ಯೋಗ್ಯವಾದುದನ್ನು ಉಪಯೋಗಿಸಿ ವಾಕ್ಯಗಳನ್ನು ಪೂರ್ಣಗೊಳಿಸಿರಿ.

1) तुम स्कूल ——— । (जा, सुन, ला)
2) आप अेक प्याला ठंडा पानी ——— । (खा, पी, चबा)
3) तू सुबह जल्दी ——— । (सो, अुठ, दौड)
4) जल्दी गाना गाअिये देर मत ——— । (कर, देख, पढ)
5) तुम यह तस्वीर ——— । (सूँघ, ले, सीख)
6) आप मुझे दस रुपये ——— । (दे, खेल, फाड)
7) रोज खुली हवा में ——— । (टहल, कर, पड)
8) आप हमको हिन्दी ——— । (देख, सिखा, लिख)
9) तू शोर मत ——— । (मचा, देख, खेल)
10) रोज स्कूल जाओ और अच्छी तरह पाठ ——— । (चल, पढ, बन)

### ಕಠಿಣ ಶಬ್ದಾರ್ಥಗಳು

चबाना–ನುರಿಸುವದು; सोना–ಮಲಗುವದು; दौडना–ಓಡುವದು; देर(ಸ್ತ್ರೀ)–ತಡ, ವಿಲಂಬ; तस्वीर(ಸ್ತ್ರೀ)–ಚಿತ್ರ; सूँघना–ಮೂಸಿನೋಡುವದು; फाडना–ಹರಿಯುವದು; टहलना-

ಅಡ್ಡಾಡುವದು; पडना—ಬೀಳುವದು; सिखाना—ಕಲಿಸುವದು; शोर मचाना—ಗದ್ದಲಮಾಡುವದು.

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಉಷಾ, ನೀನು ಒಂದು ಗ್ಲಾಸು ನೀರನ್ನು ತೆಗೆದು ಕೊಂಡು ಬಾ. (2) ನೀನು ಬೆಳಿಗ್ಗೆ ಬೇಗ ಏಳು. (3) ತಾವು ಈ ಪುಸ್ತಕವನ್ನು ಓದಿರಿ. (4) ಹೊಲದಲ್ಲಿ ಕೆಲಸ ಮಾಡಿರಿ. (5) ನೀವು ನಕಾಶೆಯಲ್ಲಿ ಹಿಮಾಲಯ ಪರ್ವತವನ್ನು ತೋರಿಸಿರಿ (6) ಮೋಹನ, ನೀನು ಬಹಳ ಹೊತ್ತು ಮಲಗಬೇಡ. (7) ಬಕುಲಾ, ನೀನು ಬೇಗ ಅಡಿಗೆ ಮಾಡು. (8) ನೀವೆಲ್ಲರೂ ಹಿಂದಿಯನ್ನು ಕಲಿಯಿರಿ. (9) ಗುರುಗಳೇ, ನಮಗೆ ಒಂದು ಕತೆಯನ್ನು ಹೇಳಿರಿ. (10) ತಾವು ಕುರ್ಚಿಯಮೇಲೆ ಕುಳಿತುಕೊಳ್ಳಿರಿ.

**ಕಠಿಣ ಶಬ್ದಾರ್ಥಗಳು**

ಗ್ಲಾಸು-गिलास(ಪು); ಬೇಗ_जल्दी; ಹೊಲ-खेत(ಪು); ತೋರಿಸುವದು-दिखाना; ಬಹಳಹೊತ್ತು-देरतक; ಅಡಿಗೆ-रसोई(ಸ್ತ್ರೀ); ನೀವೆಲ್ಲರೂ-तुम सब ।

---

## पाठ 4

### सामान्य वर्तमानकाल (ಸಾಮಾನ್ಯ ವರ್ತಮಾನಕಾಲ)

ಕ್ರಿಯಾಪದದ ಕಾರ್ಯವು ಸದ್ಯದಲ್ಲಿಯೇ ನಡೆಯುತ್ತಿದೆ, ಎಂಬುದನ್ನು ಸೂಚಿಸುವದಕ್ಕೆ ವರ್ತಮಾನಕಾಲ ವೆನ್ನುತ್ತಾರೆ.

ಕ್ರಿಯಾಪದದ ಕಾರ್ಯವು ಸಾಮಾನ್ಯವಾಗಿ ಸಾಗಿದೆ, ಎಂಬುದನ್ನು ಸೂಚಿಸುವದಕ್ಕೆ **ಸಾಮಾನ್ಯ ವರ್ತಮಾನಕಾಲವೆನ್ನುತ್ತಾರೆ.**

ಪುಲ್ಲಿಂಗ ಏಕವಚನದಲ್ಲಿ ಧಾತುವಿಗೆ ता, ಬಹುವಚನದಲ್ಲಿ ते, ಸ್ತ್ರೀಲಿಂಗ ಏಕವಚನ ಮತ್ತು ಬಹುವಚನಗಳೆರಡರಲ್ಲಿಯೂ ती ಪ್ರತ್ಯಯವನ್ನು ಜೋಡಿಸಿ ಅವುಗಳ ಮುಂದೆ हो ಧಾತುವಿನ ವರ್ತಮಾನಕಾಲದ ರೂಪಗಳಾದ है, हैं, हूँ, हो ಇವುಗಳನ್ನು ಕರ್ತೃವಿಗನುಸಾರವಾಗಿ ಇಡುವದರಿಂದ ಸಾಮಾನ್ಯ ವರ್ತಮಾನಕಾಲದ ರೂಪಗಳಾಗುತ್ತವೆ.

## ಪುಲ್ಲಿಂಗ ಕರ್ತೃ—सीख ಧಾತು

| ಏಕವಚನ | ಬಹುವಚನ |
| --- | --- |
| मैं सीखता हूँ ।<br>ನಾನು ಕಲಿಯುತ್ತೇನೆ. | हम सीखते हैं ।<br>ನಾವು ಕಲಿಯುತ್ತೇವೆ. |
| तू सीखता है ।<br>ನೀನು ಕಲಿಯುತ್ತೀ. | तुम सीखते हो ।<br>ನೀವು ಕಲಿಯುತ್ತೀರಿ.<br>आप सीखते हैं ।<br>ತಾವು ಕಲಿಯುತ್ತೀರಿ. |
| वह सीखता है ।<br>ಅವನು ಕಲಿಯುತ್ತಾನೆ.<br>ಅದು ಕಲಿಯುತ್ತದೆ. | वे सीखते हैं ।<br>ಅವರು ಕಲಿಯುತ್ತಾರೆ.<br>ಅವು ಕಲಿಯುತ್ತವೆ. |
| यह सीखता है ।<br>ಇವನು ಕಲಿಯುತ್ತಾನೆ.<br>ಇದು ಕಲಿಯುತ್ತದೆ. | ये सीखते हैं ।<br>ಇವರು ಕಲಿಯುತ್ತಾರೆ.<br>ಇವು ಕಲಿಯುತ್ತವೆ. |

## ಸ್ತ್ರೀಲಿಂಗ ಕರ್ತೃ—सीख ಧಾತು

| ಏಕವಚನ | ಬಹುವಚನ |
|---|---|
| मैं सीखती हूँ। ನಾನು ಕಲಿಯುತ್ತೇನೆ. | हम सीखती हैं। ನಾವು ಕಲಿಯುತ್ತೇವೆ. |
| तू सीखती है। ನೀನು ಕಲಿಯುತ್ತೀ. | तुम सीखती हो। ನೀವು ಕಲಿಯುತ್ತೀರಿ. आप सीखती हैं। ತಾವು ಕಲಿಯುತ್ತೀರಿ. |
| वह सीखती है। ಅವಳು ಕಲಿಯುತ್ತಾಳೆ. ಅದು ಕಲಿಯುತ್ತದೆ. | वे सीखती हैं। ಅವರು ಕಲಿಯುತ್ತಾರೆ. ಅವು ಕಲಿಯುತ್ತವೆ. |
| यह सीखती है। ಇವಳು ಕಲಿಯುತ್ತಾಳೆ. ಇದು ಕಲಿಯುತ್ತದೆ. | ये सीखती हैं। ಇವರು ಕಲಿಯುತ್ತಾರೆ. ಇವು ಕಲಿಯುತ್ತವೆ. |

ಸಾಮಾನ್ಯ ವರ್ತಮಾನಕಾಲದಲ್ಲಿ ನಿಷೇಧಾರ್ಥಕ नहीं (ಇಲ್ಲ) ಉಪಯೋಗಿಸಿದಾಗ हो ಧಾತುವಿನ ವರ್ತಮಾನಕಾಲದ ರೂಪಗಳಾದ है, हैं, हूँ, हो ಗಳನ್ನು ವಾಕ್ಯಸೌಂದರ್ಯಕ್ಕಾಗಿ ಸಾಮಾನ್ಯವಾಗಿ ಉಪಯೋಗಿಸುವದಿಲ್ಲ. ಉದಾ:— लिंगराज चाय नहीं पीता। ಲಿಂಗರಾಜನು ಚಹಾ ಕುಡಿಯುವದಿಲ್ಲ. शेर घास नहीं खाते। ಸಿಂಹಗಳು ಹುಲ್ಲು ತಿನ್ನುವದಿಲ್ಲ. अन्नपूर्णा नहीं रोती। ಅನ್ನಪೂರ್ಣಾ ಅಳುವದಿಲ್ಲ. ಆದರೆ ನಿಷೇಧಾರ್ಥಕ ಸಾಮಾನ್ಯ ವರ್ತಮಾನಕಾಲದ ಸ್ತ್ರೀಲಿಂಗ ಬಹುವಚನದಲ್ಲಿ ती ಇದರ ಮೇಲೆ ಅನುಸ್ವಾರದ ಚಿಹ್ನವಾದ (ं) ಬಿಂದು ಬರುತ್ತದೆ. ಉದಾ:—

लडकियाँ झगडा नहीं करतीं। ಹುಡುಗಿಯರು ಜಗಳಾಡುವ-ದಿಲ್ಲ.

## ಅಭ್ಯಾಸನಗಳು

(अ) ಕೆಳಗಿನ ಕ್ರಿಯಾಪದಗಳ ಲಿಂಗವನ್ನು ಬದಲಿಸಿರಿ.

(1) वह रोज स्कूल जाता है। (2) तुम गाना सुनते हो। (3) मैं तमाशा देखता हूँ। (4) वहाँ कौन जाती हैं? (5) वे चाय पीती हैं। (6) आप बेंगलूर कब जाते हैं? (7) मैं सत्यनारायण कथा सुनता हूँ। (8) हम सब कर्नाटक विश्वविद्यालय देखने जाती हैं।

(ब) ಕರ್ತೃಪದವನ್ನು ಕಂಸಿನಲ್ಲಿ ಸೂಚಿಸಿರುವಂತೆ ಬದಲಾಯಿಸಿರಿ.

(1) मैं बंबई जाता हूँ। (मैं ದ ಬದಲಾಗಿ तुम ಉಪಯೋಗಿಸಿರಿ.) (2) आप क्या करते हैं? (आप ದ ಬದ-ಲಾಗಿ वे ಉಪಯೋಗಿಸಿರಿ.) (3) तुम बाजार कब जाते हो? (तुम ದ ಬದಲಾಗಿ वह ಉಪಯೋಗಿಸಿರಿ.) (4) तू रोज क्या खाती है? (तू ದ ಬದಲಾಗಿ ये ಉಪಯೋಗಿಸಿರಿ. (5) हम गाना गाते हैं। (हम ದ ಬದಲಾಗಿ तू ಉಪಯೋಗಿಸಿರಿ.) (6) वह दूध पीता है। (वह ದ ಬದಲಾಗಿ मैं ಉಪಯೋಗಿಸಿರಿ.) (7) वे तमाशा दिखाती हैं। (वे ದ ಬದಲಾಗಿ तुम ಉಪಯೋಗಿಸಿರಿ.) (8) यह जल्दी नहीं अुठता। (यह ದ ಬದಲಾಗಿ हम ಉಪಯೋಗಿಸಿರಿ.)

(क) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಸತ್ಯಬೋಧನು ಮೋಟರಿನಲ್ಲಿ ಶಾಲೆಗೆ ಬರುತ್ತಾನೆ. (2) ನೀವು ದಿಲ್ಲಿಗೆ ಯಾವಾಗ ಹೋಗುತ್ತೀರಿ? (3) ವಿನೋಬಾ-ರವರು ದೇಶದ ಸೇವೆಯನ್ನು ಮಾಡುತ್ತಾರೆ. (4) ರತ್ನಪ್ರಭಾ ಚೆನ್ನಾಗಿ ಹಾಡುತ್ತಾಳೆ. (5) ನಾಯಿಗಳು ಬೊಗಳುತ್ತವೆ. (6) ಬೆಕ್ಕುಗಳು ಹಾಲನ್ನು ಬಹಳ ಪ್ರೇಮದಿಂದ ಕುಡಿಯುತ್ತವೆ. (7) ಸುಶೀಲಾ ಈಗ ಎಲ್ಲಿ ಇರುತ್ತಾಳೆ? (8) ಆರು ಘಂಟೆಗೆ ನಾವು ಶಾಲೆಯಲ್ಲಿ ಇರುವದಿಲ್ಲ. (9) ನಾವು ಯಾವಾಗಲೂ ಹಿಂದಿಯಲ್ಲಿ ಮಾತನಾಡುತ್ತೇವೆ. (10) ಮೀನಗಳು ನೀರಿನ ಹೊರಗೆ ಜೀವಿ-ಸುವದಿಲ್ಲ.

**ಕ. ಶ:**—ಯಾವಾಗ–कब; ಸೇವೆ–सेवा(ಸ್ತ್ರೀ); ಬೊಗಳುವದು–भूँकना; ಈಗ–अब; ಎಲ್ಲಿ–कहाँ; ಯಾವಾಗಲೂ–हमेशा; ಮೀನಗಳು–मछलियाँ(ಸ್ತ್ರೀ); ಹೊರಗೆ–के बाहर; ಜೀವಿಸುವದು–जीना।

# पाठ 5

## तात्कालिक वर्तमानकाल (ತಾತ್ಕಾಲಿಕ ವರ್ತಮಾನಕಾಲ)

ಕ್ರಿಯಾಪದದ ಕಾರ್ಯವು ಮುಗಿಯದೆ ಇನ್ನೂ ನಡೆಯುತ್ತ-ಲಿದೆ, ಎಂಬದನ್ನು ಸೂಚಿಸುವದಕ್ಕೆ **ತಾತ್ಕಾಲಿಕ ವರ್ತಮಾನಕಾಲ**ವೆನ್ನುತ್ತಾರೆ.

ಪುಲ್ಲಿಂಗ ಏಕವಚನದಲ್ಲಿ ಧಾತುವಿನ ಮುಂದೆ रहा, ಬಹು-ವಚನದಲ್ಲಿ रहे, ಸ್ತ್ರೀಲಿಂಗ ಏಕವಚನ ಮತ್ತು ಬಹುವಚನಗಳೆರಡ-

ರಲ್ಲಿಯೂ ರಹೀ ಇಟ್ಟು, ಅವುಗಳ ಮುಂದೆ ಹೊ ಧಾತುವಿನ ವರ್ತಮಾನಕಾಲದ ರೂಪಗಳಾದ ಹೈ, ಹೈ, ಹೂ, ಹೊ ಇವುಗಳನ್ನು ಕರ್ತೃವಿಗನುಸಾರವಾಗಿ ಇಡುವದರಿಂದ ತಾತ್ಕಾಲಿಕ ವರ್ತಮಾನಕಾಲದ ರೂಪಗಳಾಗುತ್ತವೆ.

## ಪುಲ್ಲಿಂಗ ಕರ್ತೃ—ದೇಖ ಧಾತು

| ಏಕವಚನ | ಬಹುವಚನ |
|---|---|
| मैं देख रहा हूँ ।<br>ನಾನು ನೋಡುತ್ತಿದ್ದೇನೆ. | हम देख रहे हैं ।<br>ನಾವು ನೋಡುತ್ತಿದ್ದೇವೆ. |
| तू देख रहा है ।<br>ನೀನು ನೋಡುತ್ತಿದ್ದೀ. | तुम देख रहे हो ।<br>ನೀವು ನೋಡುತ್ತಿದ್ದೀರಿ.<br>आप देख रहे हैं ।<br>ತಾವು ನೋಡುತ್ತಿದ್ದೀರಿ. |
| वह देख रहा है ।<br>ಅವನು ನೋಡುತ್ತಿದ್ದಾನೆ.<br>ಅದು ನೋಡುತ್ತಿರುತ್ತದೆ. | वे देख रहे हैं ।<br>ಅವರು ನೋಡುತ್ತಿದ್ದಾರೆ.<br>ಅವು ನೋಡುತ್ತಿರುತ್ತವೆ. |
| यह देख रहा है ।<br>ಇವನು ನೋಡುತ್ತಿದ್ದಾನೆ.<br>ಇದು ನೋಡುತ್ತಿರುತ್ತದೆ. | ये देख रहे हैं ।<br>ಇವರು ನೋಡುತ್ತಿದ್ದಾರೆ.<br>ಇವು ನೋಡುತ್ತಿರುತ್ತವೆ. |

## ಸ್ತ್ರೀಲಿಂಗ ಕರ್ತೃ—ದೇಖ ಧಾತು

| | |
|---|---|
| मैं देख रही हूँ ।<br>ನಾನು ನೋಡುತ್ತಿದ್ದೇನೆ. | हम देख रही हैं ।<br>ನಾವು ನೋಡುತ್ತಿದ್ದೇವೆ. |

तू देख रही है।
ನೀನು ನೋಡುತ್ತಿರುವಿ.

तुम देख रही हो।
ನೀವು ನೋಡುತ್ತಿದ್ದೀರಿ.
आप देख रही हैं।
ತಾವು ನೋಡುತ್ತಿದ್ದೀರಿ.

वह देख रही है।
ಅವಳು ನೋಡುತ್ತಿದ್ದಾಳೆ.
ಅದು ನೋಡುತ್ತಿರುತ್ತದೆ.

वे देख रही हैं।
ಅವರು ನೋಡುತ್ತಿದ್ದಾರೆ.
ಅವು ನೋಡುತ್ತಿರುತ್ತವೆ.

यह देख रही है।
ಇವಳು ನೋಡುತ್ತಿದ್ದಾಳೆ.
ಇದು ನೋಡುತ್ತಿರುತ್ತದೆ.

ये देख रही हैं।
ಇವರು ನೋಡುತ್ತಿದ್ದಾರೆ.
ಇವು ನೋಡುತ್ತಿರುತ್ತವೆ.

## ಅಭ್ಯಸನಗಳು

(अ) ಕೆಳಗಿನ ವಾಕ್ಯಗಳ ಕ್ರಿಯಾಪದಗಳನ್ನು ತಾತ್ಕಾಲಿಕ ವರ್ತಮಾನಕಾಲಕ್ಕೆ ಬದಲಾಯಿಸಿರಿ.

(1) अमीर आदमी धन कमाता है। (2) वह आसमानके तारे गिनता है। (3) बसव इमलीके बीज चुनता है। (4) औरत प्याज काटती है। (5) पुट्टप्पाजी अंगूर खाते हैं। (6) आशा आँसू बहाती है। (7) वह लडका बाजार में गाजर चुराता है। (8) लडके गेंद खेलते हैं।

ಕ. ಶ:— अमीर–ಶ್ರೀಮಂತ; कमाना–ಗಳಿಸುವದು; आसमान(ಪು) -ಆಕಾಶ; इमली(ಸ್ತ್ರೀ)–ಹುಣಸೀಹಣ್ಣು; चुनना–ಆರಿಸುವದು; औरत–ಹೆಣ್ಣುಮಗಳು; प्याज(ಪು)–ಉಳ್ಳೀಗಡ್ಡಿ;

काटना–ಕೊಯ್ಯುವದು; अंगूर(ಪು)–ದ್ರಾಕ್ಷೆಹಣ್ಣು; आँसू(ಪು)–ಕಣ್ಣೀರು; बहाना-ಹರಿಸುವದು; गाजर(ಪು)–ಗಜ್ಜರಿ; गेंद(ಪು)–ಚೆಂಡು.

(ब) ತೆರವಿದ್ದ ಸ್ಥಳದಲ್ಲಿ ಕಂಸಿನಲ್ಲಿ ಕೊಟ್ಟ ಯೋಗ್ಯ ಧಾತುವಿನ **ತಾತ್ಕಾಲಿಕ ವರ್ತಮಾನಕಾಲದ** ಕ್ರಿಯಾಪದವನ್ನು ತುಂಬಿರಿ.

1) जुलाहा कपडा——— । (सी, बुन, चला)

2) गरीब रोटी——— । (माँग, बेच, पी)

3) अक्कमहादेवी कशीदा——— । (बन, खेल, काढ)

4) हिरन जंगल में——— । (चर, चरा, तैर)

5) रत्ना बाजार में मिर्च——— । (सुन, खींच, खरीद)

6) मछुआ तलाब में मछली——— । (पकड, फेंक, गिर)

7) माधवी कहानी——— । (सुन, छोड, चल)

8) छाया डिब्बेका ढक्कन——— । (खोल, मार, पढ)

**ಕ. ಶ:**— जुलाहा(ಪು)–ನೇಕಾರ; बुनना–ನೆಯ್ಯುವದು; माँगना–ಬೇಡುವದು; कशीदा(ಪು)–ಕಸೂತಿ; काढना–ತೆಗೆಯುವದು; हिरन(ಪು)-ಚಿಗರಿ; चराना–ಮೇಯಿಸುವದು; चरना–ಮೇಯುವದು; तैरना–ಈಸುವದು; मिर्च(ಸ್ತ್ರೀ)–ಮೆಣಸಿನಕಾಯಿ; मछुआ–ಮೀನಗಾರ; मछली(ಸ್ತ್ರೀ)–ಮೀನ; पकडना–ಹಿಡಿಯುವದು; ढक्कन(ಪು)–ಮುಚ್ಚಳ; खोलना–ತೆರೆಯುವದು.

(क) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಆಕಾಶದಲ್ಲಿ ನಕ್ಷತ್ರಗಳು ಹೊಳೆಯುತ್ತಿರುತ್ತವೆ. (2) ಒಕ್ಕಲಿಗನು ಹೊಲದಲ್ಲಿ ರಂಟೆಯನ್ನು ಹೊಡೆಯುತ್ತಿದ್ದಾನೆ. (3) ಕೂಲಿಕಾರನು ನೆಲವನ್ನು ಅಗೆಯುತ್ತಿದ್ದಾನೆ. (4) ಬಸವರಾಜನು ಬಯಲಿನಲ್ಲಿ ಓಡುತ್ತಿದ್ದಾನೆ. (5) ಸಿದ್ಧರಾಮೇಶ್ವರರು ಭಾಷಣಮಾಡುತ್ತಿದ್ದಾರೆ. (6) ಸುನಂದಾ ಈಗ ಸಿನೇಮಾಕ್ಕೆ ಹೋಗುತ್ತಿದ್ದಾಳೆ. (7) ನಾಗೂ ಏಕೆ ಅಳುತ್ತಿದ್ದಾಳೆ? (8) ನೀನು(ಸ್ತ್ರೀ) ಈಗ ಏನು ಮಾಡುತ್ತಿರುವಿ? (9) ಸುಭಾಸನು ಆಟವಾಡುತ್ತಿದ್ದಾನೆ. (10) ಮುರಿಗೆಪ್ಪನವರು ತಮ್ಮ ಬಟ್ಟೆಗಳನ್ನು ತಾವೇ ಒಗೆಯುತ್ತಿದ್ದಾರೆ.

ಕ. ಶ:— ಹೊಳೆಯುವದು—चमकना; ಒಕ್ಕಲಿಗ—किसान; ರಂಟೆ ಹೊಡೆಯುವದು—हल चलाना; ಅಗಿಯುವದು—खोदना; ಈಗ—अब; ಏಕೆ—क्यों; ತಮ್ಮ—अपना; ತಾವೇ—खुद ही ।




---

## पाठ 6

### सामान्य भविष्यत्काल (ಸಾಮಾನ್ಯ ಭವಿಷ್ಯತ್ಕಾಲ)

ಕ್ರಿಯಾಪದದ ಕಾರ್ಯವು ಭವಿಷ್ಯತ್ತಿನಲ್ಲಿ ನಡೆಯುವದೆಂಬುದನ್ನು ಸೂಚಿಸುವದಕ್ಕೆ ಭವಿಷ್ಯತ್ಕಾಲವೆನ್ನುತ್ತಾರೆ.

ಕ್ರಿಯಾಪದದ ಕಾರ್ಯವು ಭವಿಷತ್ತಿನಲ್ಲಿ ಸಾಮಾನ್ಯವಾಗಿ ನಡೆದಿದೆ, ಎಂಬುದನ್ನು ಸೂಚಿಸುವದಕ್ಕೆ ಸಾಮಾನ್ಯ ಭವಿಷ್ಯತ್ಕಾಲವೆನ್ನುತ್ತಾರೆ.

ಧಾತುಗಳಿಗೆ ಈ ಕೆಳಗಿನ ಪ್ರತ್ಯಯಗಳನ್ನು ಜೋಡಿಸುವದರಿಂದ ಸಾಮಾನ್ಯ ಭವಿಷ್ಯತ್ಕಾಲದ ಪುಲ್ಲಿಂಗ ಕ್ರಿಯಾಪದಗಳಾಗುತ್ತವೆ.

**ಸಾಮಾನ್ಯ ಭವಿಷ್ಯತ್ಕಾಲದ ಪುಲ್ಲಿಂಗ ಪ್ರತ್ಯಯಗಳು**

| ಏಕವಚನ | ಬಹುವಚನ |
| --- | --- |
| मैं ऊँगा। | हम एँगे। |
| तू एगा। | तुम ओगे। / आप एँगे। |
| वह एगा | वे एँगे। |
| यह एगा | ये एँगे। |

ಸ್ತ್ರೀಲಿಂಗದಲ್ಲಿ ಮೇಲಿನ ಪ್ರತ್ಯಯಗಳಲ್ಲಿಯ ಅಂತ್ಯಾಕ್ಷರಗಳಾದ गा, गे ಗಳು गी ಗಳಾಗುತ್ತವೆ. ಉದಾ:— एगी, एँगी, ऊँगी, ओगी।

**ಪುಲ್ಲಿಂಗ ಕರ್ತೃ—खा ಧಾತು**

| ಏಕವಚನ | ಬಹುವಚನ |
| --- | --- |
| **मैं खाऊँगा।** ನಾನು ತಿನ್ನುವೆನು. | हम खाएँगे। ನಾವು ತಿನ್ನುವೆವು. |
| **तू खाएगा।** ನೀನು ತಿನ್ನುವಿ. | तुम खाओगे। ನೀವು ತಿನ್ನುವಿರಿ. / आप खाएँगे। ತಾವು ತಿನ್ನುವಿರಿ. |

ವಿ. ಸೂ:— अ ಕಾರಾಂತ ಧಾತುಗಳನ್ನುಳಿದು ಮಿಕ್ಕೆಲ್ಲ ಧಾತುಗಳಿಗೆ ಭವಿಷ್ಯತ್ಕಾಲದ ಪ್ರತ್ಯಯಗಳನ್ನು ಜೋಡಿಸುವಾಗ ಆ ಪ್ರತ್ಯಯಗಳಲ್ಲಿಯ ಎದ ಬದಲಾಗಿ ವಿಕಲ್ಪದಿಂದ ये ಇಲ್ಲವೆ वे ಬರುತ್ತದೆ. ಉದಾ:— खायेगा, खावेगा, खायेंगी, खावेंगी।

| | |
|---|---|
| वह खाएगा। | वे खाएँगे। |
| ಅವನು ತಿನ್ನುವನು. | ಅವರು ತಿನ್ನುವರು. |
| ಅದು ತಿನ್ನುವದು. | ಅವು ತಿನ್ನುವವು. |
| यह खाएगा। | ये खाएँगे। |
| ಇವನು ತಿನ್ನುವನು. | ಇವರು ತಿನ್ನುವರು. |
| ಇದು ತಿನ್ನುವದು. | ಇವು ತಿನ್ನುವವು. |

### ಸ್ತ್ರೀಲಿಂಗ ಕರ್ತೃ—ಖಾ ಧಾತು

| ಏಕವಚನ | ಬಹುವಚನ |
|---|---|
| मैं खाऊँगी। | हम खाएँगी। |
| ನಾನು ತಿನ್ನುವೆನು. | ನಾವು ತಿನ್ನುವೆವು. |
| तू खाएगी। | तुम खाओगी। |
| ನೀನು ತಿನ್ನುವಿ. | ನೀವು ತಿನ್ನುವಿರಿ. |
| | आप खाएँगी। |
| | ತಾವು ತಿನ್ನುವಿರಿ. |
| वह खाएगी। | वे खाएँगी। |
| ಅವಳು ತಿನ್ನುವಳು. | ಅವರು ತಿನ್ನುವರು. |
| ಅದು ತಿನ್ನುವದು. | ಅವು ತಿನ್ನುವವು. |
| यह खाएगी। | ये खाएँगी। |
| ಇವಳು ತಿನ್ನುವಳು. | ಇವರು ತಿನ್ನುವರು. |
| ಇದು ತಿನ್ನುವದು. | ಇವು ತಿನ್ನುವವು. |

ಅ ಕಾರಾಂತ ಧಾತುಗಳಿಗೆ ಭವಿಷ್ಯತ್ಕಾಲದ ಪ್ರತ್ಯಯಗಳು ಹತ್ತುವಾಗ ಧಾತುವಿನ ಅಂತ್ಯ ಅ ಸ್ವರವು ಲೋಪವಾಗುತ್ತದೆ. ಉದಾ:— पढ+ऊँगा=पढ्+अ+ऊँगा=पढूँगा। ಇಲ್ಲಿ ಅ ಸ್ವರವು ಲೋಪವಾಗಿದೆ.

दे (ಕೊಡು), ले (ತೆಗೆದುಕೊ) ಧಾತುಗಳಿಗೆ ಭವಿಷ್ಯತ್ಕಾಲದ ಪ್ರತ್ಯಯಗಳು ಹತ್ತುವಾಗ ಇವುಗಳಲ್ಲಿಯ ಎ ಸ್ವರವು ಲೋಪವಾಗುತ್ತದೆ. ಉದಾ:—दे+ऊँगा=द्+ए+ऊँगा=दूँगा; ಇಲ್ಲಿ ಎ ಸ್ವರವು ಲೋಪವಾಗಿದೆ. ಈ ನಿಯಮಕ್ಕನುಸರಿಸಿ दे, ले ಗಳ ಭವಿಷ್ಯತ್ಕಾಲದ ಪುಲ್ಲಿಂಗರೂಪಗಳು ಈ ಕೆಳಗಿನಂತೆಯಾಗುತ್ತವೆ.

### ಪುಲ್ಲಿಂಗ ಕರ್ತೃ—दे ಧಾತು

| ಏಕವಚನ | ಬಹುವಚನ |
|---|---|
| मैं दूँगा । ನಾನು ಕೊಡುವೆನು. | हम देंगे । ನಾವು ಕೊಡುವೆವು. |
| तू देगा । ನೀನು ಕೊಡುವಿ. | तुम दोगे । ನೀವು ಕೊಡುವಿರಿ<br>आप देंगे । ತಾವು ಕೊಡುವಿರಿ. |
| वह देगा । ಅವನು ಕೊಡುವನು. ಅದು ಕೊಡುವದು. | वे देंगे । ಅವರು ಕೊಡುವರು. ಅವು ಕೊಡುವವು. |
| यह देगा । ಇವನು ಕೊಡುವನು. ಇದು ಕೊಡುವದು. | ये देंगे । ಇವರು ಕೊಡುವರು. ಇವು ಕೊಡುವವು. |

### ಪುಲ್ಲಿಂಗ ಕರ್ತೃ—ले ಧಾತು

| ಏಕವಚನ | ಬಹುವಚನ |
|---|---|
| मैं लूँगा । ನಾನು ತೆಗೆದುಕೊಳ್ಳುವೆನು. | हम लेंगे । ನಾವು ತೆಗೆದುಕೊಳ್ಳುವೆವು. |

| | |
|---|---|
| तू लेगा। ನೀನು ತೆಗೆದುಕೊಳ್ಳುವಿ. | तुम लोगे। ನೀವು ತೆಗೆದುಕೊಳ್ಳುವಿರಿ. आप लेंगे। ತಾವು ತೆಗೆದುಕೊಳ್ಳುವಿರಿ. |
| वह लेगा। ಅವನು ತೆಗೆದುಕೊಳ್ಳುವನು. ಅದು ತೆಗೆದುಕೊಳ್ಳುವದು. | वे लेंगे। ಅವರು ತೆಗೆದುಕೊಳ್ಳುವರು. ಅವು ತೆಗೆದುಕೊಳ್ಳುವವು. |
| यह लेगा। ಇವನು ತೆಗೆದುಕೊಳ್ಳುವನು. ಇದು ತೆಗೆದುಕೊಳ್ಳುವದು. | ये लेंगे। ಇವರು ತೆಗೆದುಕೊಳ್ಳುವರು. ಇವು ತೆಗೆದುಕೊಳ್ಳುವವು. |

ಮೇಲಿನ ಲೆ, ದೆ ಪುಲ್ಲಿಂಗ ಕ್ರಿಯಾಪದಗಳ ಅಂತ್ಯಾಕ್ಷರಗಳಾದ गा, गे ಗಳು ಸ್ತ್ರೀಲಿಂಗ ಕರ್ತೃವಿದ್ದಾಗ गी ಆಗುತ್ತವೆ.

ಈ ಮತ್ತು ಊ ಕಾರಾಂತ ಧಾತುಗಳಿಗೆ ಭವಿಷ್ಯತ್ಕಾಲದಲ್ಲಿ ಸ್ವರದಿಂದ ಆರಂಭವಾಗುವ ಪ್ರತ್ಯಯಗಳು (एगा, एँगे, ऊँगा, ओगे) ಹತ್ತುವಾಗ ಧಾತುಗಳ ಅಂತ್ಯ ದೀರ್ಘಸ್ವರವು ಹ್ರಸ್ವವಾಗುತ್ತದೆ. ಉದಾ:— पिएगा, पिएँगे, पिऊँगा, पिओगे, छुएगा, छुएँगे, छुऊँगा, छुओगे। ಆದರೆ ವ್ಯಂಜನದಿಂದ ಆರಂಭವಾಗುವ ಪ್ರತ್ಯಯಗಳು (येगा, येंगे, वेगा, वेंगे) ಹತ್ತುವಾಗ ಧಾತುಗಳ ಅಂತ್ಯ ದೀರ್ಘಸ್ವರವು ಬದಲಾಗುವದಿಲ್ಲ. ಉದಾ:— पीयेगा, पीवेगा, पीयेंगे, पीवेंगे, छूयेगा, छूवेगा, छूयेंगे, छूवेंगे।

हो (ಆಗು) ಧಾತುವಿನ ಭವಿಷ್ಯತ್ಕಾಲದ ರೂಪಗಳು ಈ ಕೆಳಗಿನಂತೆ ಆಗುತ್ತವೆ.

## ಪುಲ್ಲಿಂಗ ಕರ್ತೃ—हो ಧಾತು

| ಏಕವಚನ | ಬಹುವಚನ |
|---|---|
| मैं हूँगा। | हम होंगे। |
| तू होगा। | तुम होगे। / आप होंगे। |
| वह होगा। | वे होंगे। |
| यह होगा। | ये होंगे। |

ಮೇಲಿನ ಕ್ರಿಯಾಪದಗಳ ಅಂತ್ಯಾಕ್ಷರಗಳಾದ गा, गे ಗಳು ಸ್ತ್ರೀಲಿಂಗ ಕರ್ತೃವಿದ್ದಾಗ गी ಆಗುತ್ತವೆ. ಉದಾ:— होगी, होंगी, हूँगी।

### ಅಭ್ಯಾಸನಗಳು

(अ) ತೆರವಿದ್ದ ಸ್ಥಳದಲ್ಲಿ ಕಂಸಿನಲ್ಲಿಕೊಟ್ಟ ಯೋಗ್ಯ ಧಾತು-ವಿನ ಸಾಮಾನ್ಯ ಭವಿಷ್ಯತ್ಕಾಲದ ಕ್ರಿಯಾಪದವನ್ನು ತುಂಬಿರಿ.

1) परसों सबेरे ललिता ससुराल———। (ले,जा,खो)
2) मैं तुमको अेक नारंगी———। (पी, दे, ले)
3) वह लडका मैदान में———। (खेल, अुड, जी)
4) यह रेलगाडी कल धारवाड———। (मर,दौड,पहुँच)
5) अशोक नारियलके पेडपर———। (चढ,अुतर,अुड)
6) तुम मेरे घर कब——— ? (आ, पढ, सुन)
7) भालचंद्र गंदी चीज नहीं———। (जा, छू, खेल)
8) तूफान में यह दिया———। (सुलग, बढ, बुझ)

ಕ. ಶ:— परसों–ನಾಡದು, ಮೊನ್ನೆ; ससुराल(ಸ್ತ್ರೀ)–ಮಾವನಮನೆ; नारंगी(ಸ್ತ್ರೀ)–ಕಿತ್ತಳೆಹಣ್ಣು; चीज(ಸ್ತ್ರೀ)–ವಸ್ತು; तूफान(ಪು)–ಬಿರುಗಾಳಿ; सुलगना–ಹೊತ್ತಿಕೊಳ್ಳುವದು; बुझना–ಆರುವದು ಅಥವಾ ನಂದುವದು.

(ब) ಕೆಳಗಿನ ವಾಕ್ಯಗಳನ್ನು ಸಾಮಾನ್ಯ ಭವಿಷ್ಯತ್ಕಾಲಕ್ಕೆ ಬದಲಾಯಿಸಿರಿ.

(1) कमजोर देश लडाई में हारता है। (2) गिरिजाधव हिन्दी सीख रहा है। (3) अरविंद क्यों रोता है ? (4) जानकी प्रणाम नहीं करती। (5) तुमको कितनी तनख्वाह मिलती है? (6) गिरिजा दु:ख सह रही है। (7) तुम अपने नौकरको क्या देते हो ? (8) मैं जलसे में इनाम ले रहा हूँ।

ಕ. ಶ:— तनख्वाह(ಸ್ತ್ರೀ)–ಪಗಾರ; कमजोर–ಅಶಕ್ತ; सहना–ಸಹಿಸುವದು; जलसा(ಪು)–ಸಭೆ.

(क) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಜಯಶೀಲಾ ನಾಳೆ ಇಸಳೂರಿಗೆ ಹೋಗುವಳು. (2) ನಾಳೆಯ ಸಭೆಯಲ್ಲಿ ನೀವು ಹಿಂದಿಯಲ್ಲಿ ಮಾತನಾಡುವಿರೋ ಅಥವಾ ಕನ್ನಡದಲ್ಲೋ? (3) ಶಕುಂತಲಾ ಶಾಲೆಗೆ ಹೋಗು-ವಳು. (4) ನಾವು (ಸ್ತ್ರೀ) ನಾಡದು ದಿಲ್ಲಿಯಿಂದ ತಿರುಗಿ ಬರುವೆವು. (5) ಉಗಿಬಂಡಿಯು ಈ ಸ್ಟೇಶನ್‌ನದಲ್ಲಿ ನಿಲ್ಲುವದು. (6) ಒಕ್ಕ-ಲಿಗನು ಸಸಿಗಳಿಗೆ ನೀರುಣ್ಣಿಸುವನು. (7) ನಾನು ಈ ಮಾವಿನ-ಹಣ್ಣುಗಳನ್ನು ಪಟ್ಟಣಕ್ಕೆ ಕಳಿಸುವೆನು. (8) ಸಿಂಧೂತಾಯಿ

ಬೇಸಿಗೆಯಲ್ಲಿ ಶರಬತ ಕುಡಿಯುವಳು. (9) ನೀನು ಬೆಂಕಿಯನ್ನು ಮುಟ್ಟುವಿಯಾ ? (10) ನಾನು ಬಡವರಿಗೆ ಅನ್ನವನ್ನು ಕೊಡುವೆನು.

**ಕ. ಶ:—** ಅಥವಾ—या; ತಿರುಗಿ ಬರುವದು—लौट आना; ಸಸಿ—पौधा(ಪು); ನೀರುಣ್ಣಿಸುವದು—सींचना; ಮಾವಿನಹಣ್ಣು—आम(ಪು); ಬೇಸಿಗೆ—गरमी(ಸ್ತ್ರೀ); ಬೆಂಕಿ—आग(ಸ್ತ್ರೀ); ಬಡವ—गरीब।

---

# पाठ 7

## संभाव्य भविष्यत्काल (ಸಂಭಾವ್ಯ ಭವಿಷ್ಯತ್ಕಾಲ)

ಕ್ರಿಯಾಪದದ ಕಾರ್ಯವು ಭವಿಷ್ಯತ್ತಿನಲ್ಲಿ ನಡೆಯುವ ಸಂಭವವಿದೆಯೆಂಬುದನ್ನು ಸೂಚಿಸುವದಕ್ಕೆ ಸಂಭಾವ್ಯ ಭವಿಷ್ಯತ್ಕಾಲವೆನ್ನುತ್ತಾರೆ. ಕನ್ನಡದಲ್ಲಿ ಇದಕ್ಕೆ ನಿದ್ಯರ್ಥಕವೆನ್ನುತಾರೆ.

ಸಾಮಾನ್ಯ ಭವಿಷ್ಯತ್ಕಾಲದ ಕ್ರಿಯಾಪದಗಳಲ್ಲಿಯ ಅಂತ್ಯಾಕ್ಷರಗಳಾದ गा, गे, गी ಗಳನ್ನು ತೆಗೆದುಬಿಡುವದರಿಂದ ಸಂಭಾವ್ಯ ಭವಿಷ್ಯತ್ಕಾಲದ ರೂಪಗಳಾಗುತ್ತವೆ. ಉದಾ:— मैं पढ़ूँ ? हम पढ़ें ? ಇತ್ಯಾದಿ. . ಸಾಮಾನ್ಯ ಭವಿಷ್ಯತ್ಕಾಲದ ಕ್ರಿಯಾಪದಗಳಿಂದ ಕರ್ತೃವಿನ ಲಿಂಗಜ್ಞಾನವಾಗುತ್ತದೆ. ಆದರೆ ಸಂಭಾವ್ಯ ಭವಿಷ್ಯತ್ಕಾಲದ ಕ್ರಿಯಾಪದಗಳಿಂದ ಕರ್ತೃವಿನ ಲಿಂಗಜ್ಞಾನವಾಗುವದಿಲ್ಲ.

जा—ಹೋಗು

| ಏಕವಚನ | ಬಹುವಚನ |
| --- | --- |
| मैं जाऊँ। | हम जाऍं। |
| तू जाऍ। | तुम जाओ।* <br> आप जाऍं। |
| वह जाऍ। | वे जाऍं। |
| यह जाऍ। | ये जाऍं। |

ಸಂಭಾವ್ಯ ಭವಿಷ್ಯತ್ಕಾಲದ ಪ್ರಯೋಗವು ಅನುಮತಿ, ಇಚ್ಛೆ, ಸಂಶಯ, ಆಜ್ಞೆ ಇತ್ಯಾದಿ ಅರ್ಥಗಳಲ್ಲಿ ಆಗುತ್ತದೆ. ಉದಾ:—

ಅನುಮತಿ:— क्या मैं बाजार जाऊँ? ನಾನು ಪೇಟೆಗೆ ಹೋಗಲೆ?

ಇಚ್ಛೆ:— भगवान आपका भला करे। ಭಗವಂತನು ತಮಗೆ ಕಲ್ಯಾಣಮಾಡಲಿ.

ಸಂಶಯ:— कौन जाने, वह कब आऍगा? ಅವನು ಯಾವಾಗ ಬರುವನೋ, ಯಾರಿಗೆ ಗೊತ್ತು?

ಆಜ್ಞೆ:— आज तुम वहाँ न जाओ। ಇಂದು ನೀನು ಅಲ್ಲಿಗೆ ಹೋಗದಿರು.

---

* तुम ಕರ್ತೃವಿನ ಸಂಭಾವ್ಯ ಭವಿಷ್ಯತ್ಕಾಲದ ಕ್ರಿಯಾಪದ ಮತ್ತು ಆಜ್ಞಾರ್ಥಕ ಕ್ರಿಯಾಪದ ಇವೆರಡರ ರೂಪಗಳು ಒಂದೇ ರೀತಿಯಾಗಿರುತ್ತವೆ. ಆದರೆ ಸಂಭಾವ್ಯ ಭವಿಷ್ಯತ್ಕಾಲದ ನಿಷೇಧದಲ್ಲಿ न ಅಥವಾ नहीं ಹಾಗು ಆಜ್ಞಾರ್ಥಕ ನಿಷೇಧದಲ್ಲಿ मत ಬರುತ್ತವೆ. ಉದಾ:— ಸಂ. ಭ:— तुम न जाओ; ಆಜ್ಞಾರ್ಥಕ:— तुम मत जाओ।

## ಅಭ್ಯಸನಗಳು

(अ) ಕೆಳಗೆ ಕೊಟ್ಟಿರುವ ಧಾತುಗಳ ಸಹಾಯದಿಂದ ಸಂಭಾವ್ಯ ಭವಿಷ್ಯತ್ಕಾಲದ ರೂಪಗಳನ್ನು ಉಪಯೋಗಿಸಿ ವಾಕ್ಯ-ಗಳನ್ನು ಪೂರ್ಣಗೊಳಿಸಿರಿ.

सोच–ವಿಚಾರಿಸು; डर–ಹೆದರು; तोल–ತೂಕಮಾಡು; छोड–ಬಿಡು; बदल–ಬದಲಿಸು; देख–ನೋಡು; नाच–ನರ್ತನಮಾಡು; बाँट–ಹಂಚು; खरीद–ಕೊಳ್ಳು; उडा–ಹಾರಿಸು;

(1) हम देशकी भलाई के बारे में———। (2) आप संकट में न———। (3) दूकानदार सामान अच्छी तरह———। (4) वे आसमान में गुब्बारे———। (5) वह अपनी बुरी आदतें———। (6) अुळवप्पाजी परीक्षा पास होनेकी खुशी में मिठाई क्यों न———? (7) नागू अेक रंगीन साडी———। (8) विनोद अपने गदे कपडे———। (9) हम सब आज सर्कस———। (10) गीता राष्ट्रीय हिन्दी विद्याभवन के जलसे में———।

**ಕ. ಶ:—** गुब्बारा(ಪು)–ಪುಗ್ಗಾ(Baloon); आदत (ಸ್ತ್ರೀ)–ರೂಢಿ, ಚಟ; रंगीन–ಬಣ್ಣದ.

(ब) **ಹಿಂದಿಯಲ್ಲಿ ಭಾಷಾಂತರಿಸಿರಿ:—**

(1) ನಾಳೆ ನಾನು ತಮ್ಮನ್ನು ಭೆಟ್ಟಿಯಾಗಲೆ? (2) ನಮ್ಮ ದೇಶವು ಪ್ರಗತಿಹೊಂದಲಿ. (3) ಚೆನ್ನಬಸಪ್ಪನವರು ಬಡವರಿಗೆ

ದಾನಮಾಡಲಿ. (4) ಅಬ್ದುಲ್ಲಗನಿಯವರು ನೃತ್ಯವನ್ನು ನೋಡಲಿ. (5) ನಾವೆಲ್ಲರೂ ಹಂಪಿಗೆ ಹೋಗೋಣ. (6) ತಾವು ಪರೀಕ್ಷೆಯಲ್ಲಿ ಪಾಸಾಗಿರಿ. (7) ದೇವರ ದಯೆಯು ನಮ್ಮೆಲ್ಲರಮೇಲಿರಲಿ. (8) ಭಾರತೀಯರು ಸುಖದಿಂದ ಬಾಳಲಿ. (9) ಮೃತ್ಯುಂಜಯ ಸ್ವಾಮಿಗಳು ಕಲ್ಲಾಪುರಕ್ಕೆ ದಯೆಮಾಡಿಸಲಿ. (10) ನೋಡೋಣ, ಈ ಸ್ಪರ್ಧೆಯಲ್ಲಿ ಯಾರು ಗೆಲ್ಲುವರು?

## पाठ 8

### लिंग (ಲಿಂಗ)

ನಾಮಗಳ ಜಾತಿ (ಪುರುಷ ಅಥವಾ ಸ್ತ್ರೀ) ಗಳಿಗೆ **ಲಿಂಗ** ವೆನ್ನುತ್ತಾರೆ. ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ-ಲಿಂಗಗಳೆಂಬ ಮೂರು ಲಿಂಗಗಳುಂಟು. ಆದರೆ ಹಿಂದಿ ಭಾಷೆಯಲ್ಲಿ ಪುಲ್ಲಿಂಗ ಹಾಗು ಸ್ತ್ರೀಲಿಂಗಗಳೆಂಬ ಎರಡೇ ಲಿಂಗಗಳುಂಟು.

ಹಿಂದಿ ಭಾಷೆಯ ನಾಮಗಳನ್ನು ಲಿಂಗಜ್ಞಾನದ ಅನುಕೂಲತೆ-ಗಾಗಿ ಸಜೀವವಾಚಕ ಮತ್ತು ನಿರ್ಜೀವವಾಚಕಗಳೆಂದು ಎರಡು ವಿಧವಾಗಿ ವಿಂಗಡಿಸಿಕೊಳ್ಳಬೇಕು. ಸಜೀವವಾಚಕ ನಾಮಗಳಲ್ಲಿ ಪುರುಷ (ಗಂಡು) ವಾಚಕ ನಾಮಗಳೆಲ್ಲವೂ ಪುಲ್ಲಿಂಗ, ಸ್ತ್ರೀ (ಹೆಣ್ಣು) ವಾಚಕ ನಾಮಗಳೆಲ್ಲವೂ ಸ್ತ್ರೀಲಿಂಗವಾಗುತ್ತವೆ. ಉದಾ:— **भाई**(ಪು)–ಸಹೋದರ; **बहन**(ಸ್ತ್ರೀ)–ಸಹೋದರಿ; **बकरा**(ಪು)–ಹೋತು; **बकरी**(ಸ್ತ್ರೀ)–ಆಡು; **मोर**(ಪು)–ನವಿಲು; **मोरनी** (ಸ್ತ್ರೀ)–ಹೆಣ್ಣು ನವಿಲು;

ಮನುಷ್ಯೇತರ ಕೆಲವು ಪ್ರಾಣಿಗಳಲ್ಲಿ ಪುರುಷ(ಗಂಡು) ಮತ್ತು ಸ್ತ್ರೀ(ಹೆಣ್ಣು) ವಾಚಕ ಪ್ರತ್ಯೇಕ ನಾಮಗಳಿರುವದಿಲ್ಲ. ಉದಾ:—

कौआ-ಕಾಗೆ; भेडिया-ತೋಳ; भालू-ಕರಡಿ; खरगोश-ಮೊಲ; ಇವುಗಳಿಂದ ಗಂಡು ಹೆಣ್ಣು ಎರಡುದರ ಬೋಧವಾಗುತ್ತಿದ್ದರೂ ಈ ನಾಮಗಳು ಮಾತ್ರ ಪುಲ್ಲಿಂಗಗಳಾಗಿವೆ. ಅದರಂತೆ चिड़िया-ಪಕ್ಷಿ, चील-ಹದ್ದು, कोयल-ಕೋಗಿಲೆ ಇವುಗಳಿಂದಲೂ ಗಂಡು ಹೆಣ್ಣು ಎರಡುದರ ಬೋಧವಾಗುತ್ತಿದ್ದರೂ ಈ ನಾಮಗಳು ಮಾತ್ರ ಸ್ತ್ರೀಲಿಂಗಗಳಾಗಿವೆ. ಆದರೆ ನಿಶ್ಚಿತವಾಗಿ ಗಂಡು ಹೆಣ್ಣುಗಳನ್ನು ಪ್ರತ್ಯೇಕವಾಗಿ ವಿಂಗಡಿಸಿ ಹೇಳಬೇಕಾದಲ್ಲಿ ಕನ್ನಡದಂತೆ ನಾಮಗಳ ಹಿಂದೆ **नर** (ಗಂಡು), **मादा** (ಹೆಣ್ಣು) ಹಚ್ಚಿ ಹೇಳಬೇಕು. ಉದಾ:— **मादा कौआ**-ಹೆಣ್ಣು ಕಾಗೆ, **मादा भेडिया**-ಹೆಣ್ಣು ತೋಳ, **नर चिड़िया**-ಗಂಡು ಪಕ್ಷಿ, **नर चील**-ಗಂಡು ಹದ್ದು ಇತ್ಯಾದಿ.

ಇನ್ನು ನಿರ್ಜೀವವಾಚಕ ನಾಮಗಳ ಲಿಂಗ ನಿರ್ಣಯವು ಕಠಿಣವಾಗಿರುತ್ತದೆ. ಹಿಂದಿ ಭಾಷೆಯಲ್ಲಿ ಇವುಗಳ ಲಿಂಗ ನಿರ್ಣಯಕ್ಕಾಗಿ ಯಾವನೇ ಕಟ್ಟುನಿಟ್ಟಾದ ನಿಯಮಗಳಿಲ್ಲ, ಅಭ್ಯಾಸ ಬಲದಿಂದಲೇ ತಿಳಿದುಕೊಳ್ಳಬೇಕು. ಆದರೂ ಸಾಮಾನ್ಯವಾಗಿ ಈ ಕೆಳಗಿನ ನಿಯಮಗಳು ಲಿಂಗಜ್ಞಾನಕ್ಕೆ ಸಹಾಯವನ್ನೊದಗಿಸುವವು.

## ಪುಲ್ಲಿಂಗ

(1) अ, आ ಕಾರಾಂತ ನಾಮಗಳು ಸಾಮಾನ್ಯವಾಗಿ ಪುಲ್ಲಿಂಗಗಳಾಗಿರುತ್ತವೆ. ಉದಾ:— घर-ಮನೆ; पेड़-ಗಿಡ; हाथ-ಕೈ; खेत-ಹೊಲ; कमरा-ಕೋಣೆ; घडा-ಕೊಡ ಇತ್ಯಾದಿ.

ಅಪವಾದಗಳು:— बात–ಮಾತು, आँख–ಕಣ್ಣು, नाक–ಮೂಗು, दवा–ಔಷಧ, सजा–ಶಿಕ್ಷೆ, ಇತ್ಯಾದಿ. ಇವು ಸ್ತ್ರೀಲಿಂಗಗಳಾಗಿವೆ.

(2) ಕೃದಂತ ಭಾವನಾಮ (ಕ್ರಿಯಾನಾಮ) ಗಳೆಲ್ಲವೂ ಪುಲ್ಲಿಂಗಗಳಾಗಿರುತ್ತವೆ. ಉದಾ:— करना–ಮಾಡುವದು ಅಥವಾ ಮಾಡುವಿಕೆ, दौडना–ಓಡುವದು ಅಥವಾ ಓಟ ಇತ್ಯಾದಿ.

(3) पा,आव,पन ಇವುಗಳಿಂದ ಅಂತ್ಯಗೊಳ್ಳುವ ಭಾವವಾಚಕ ನಾಮಗಳು ಪುಲ್ಲಿಂಗವಾಗಿರುತ್ತವೆ. ಉದಾ:— बुढापा–ಮುಪ್ಪು; चढाव–ಏರಿಕೆ; बचपन–ಬಾಲ್ಯ ಇತ್ಯಾದಿ.

(4) ಊರು, ಪರ್ವತ, ದೇಶ, ವಾರ ಮತ್ತು ತಿಂಗಳುಗಳ ಹೆಸರುಗಳು ಸಾಮಾನ್ಯವಾಗಿ ಪುಲ್ಲಿಂಗಗಳಾಗಿರುತ್ತವೆ. ಉದಾ:— धारवाड, हिमालय, भारत, गुरुवार, चैत्र ಇತ್ಯಾದಿ.

## ಸ್ತ್ರೀಲಿಂಗ

(1) इ,ई ಕಾರಾಂತ ನಾಮಗಳು ವಿಶೇಷವಾಗಿ ಸ್ತ್ರೀಲಿಂಗಗಳಾಗಿರುತ್ತವೆ. ಉದಾ:— घडी–ಗಡಿಯಾರ; तिथि–ತಿಥಿ; मति–ಬುದ್ಧಿ; चिट्ठी–ಪತ್ರ ಇತ್ಯಾದಿ.

ಅಪವಾದಗಳು:— पानी–ನೀರು; मोती–ಮುತ್ತು; दही–ಮೊಸರು; मही–ಮಜ್ಜಿಗೆ; घी–ತುಪ್ಪ; जी–ಜೀವ; ಇವು ಪುಲ್ಲಿಂಗಗಳಾಗಿವೆ.

(2) ಭೂಮಿಯಮೇಲೆ ಚಲಿಸುವ ವಾಹನಗಳ ನಾಮಗಳು ಸ್ತ್ರೀಲಿಂಗಗಳಾಗಿವೆ. ಉದಾ:— मोटर–ಮೋಟರ; रेलगाडी–ಉಗಿಬಂಡಿ; साइकल–ಸಾಯಿಕಲ್ ಇತ್ಯಾದಿ.

**ಅಪವಾದಗಳು:—** ताँगा–ಟಾಂಗಾ; अिक्का–ಎಕ್ಕಾ-ಗಾಡಿ; रथ–ರಥ; ಇವು ಪುಲ್ಲಿಂಗಗಳಾಗಿರುತ್ತವೆ.

(3) हट, वट, ट ಇವುಗಳಿಂದ ಅಂತ್ಯಗೊಳ್ಳುವ ಭಾವ-ವಾಚಕನಾಮಗಳು ಸ್ತ್ರೀಲಿಂಗಗಳಾಗಿರುತ್ತವೆ. ಉದಾ:—घबराहट–ಘಾಬರಿಗೊಳ್ಳುವಿಕೆ; आहट–ಕಾಲುಸಪ್ಪಳ; बनावट–ಮಾಡುವಿಕೆ; सजावट–ಶಿಂಗರಿಸುವಿಕೆ; झंझट–ತೊಂದರೆ ಇತ್ಯಾದಿ.

(4) *आ ಕಾರಾಂತ ಸಂಸ್ಕೃತ ನಾಮಗಳು ಸ್ತ್ರೀಲಿಂಗ-ಗಳಾಗಿರುತ್ತವೆ. ಉದಾ:— कृपा–ಕೃಪೆ; प्रार्थना–ಪ್ರಾರ್ಥನೆ; आशा–ಆಶೆ; सभा–ಸಭೆ; महिमा–ಮಹಿಮೆ ಇತ್ಯಾದಿ.

(5) ಭಾಷಾಸೂಚಕ ನಾಮಗಳು ಸ್ತ್ರೀಲಿಂಗಗಳಾಗಿರುತ್ತವೆ. ಉದಾ:— कन्नड, अंग्रेजी, तेलुगु, हिन्दी, अुर्दू ಇತ್ಯಾದಿ.

(6) ನದಿಗಳ ಹೆಸರುಗಳು ಸ್ತ್ರೀಲಿಂಗಗಳಾಗಿರುತ್ತವೆ. ಉದಾ:— कावेरी, कृष्णा, जमुना, गगा, कुमद्वती, घटप्रभा, मलापहारी ಇತ್ಯಾದಿ.

**ಅಪವಾದಗಳು:—** सोन, सिंधु, ब्रह्मपुत्र ಪುಲ್ಲಿಂಗ-ಗಳಾಗಿರುತ್ತವೆ.

ಇನ್ನು ಕೆಲವು ನಾಮಗಳು ಉಭಯಲಿಂಗಗಳಾಗಿರುತ್ತವೆ. ಉದಾ:— आत्मा, गडबड, चाल-चलन, तमाखू, पवन, बर्फ, मजा, याद ಮೊದಲಾದವುಗಳು ಎರಡೂ ಲಿಂಗಗಳಲ್ಲಿ

---

*आ ಕಾರಾಂತ ಸಂಸ್ಕೃತ ನಾಮಗಳು ಕನ್ನಡದಲ್ಲಿ ಎ ಕಾರಾಂತವಾಗು-ತ್ತವೆ. ಉದಾ:— आलोचना–ಆಲೋಚನೆ; दया–ದಯೆ; शाला–ಶಾಲೆ ಇತ್ಯಾದಿ.

ಉಪಯೋಗಿಸಲ್ಪಡುತ್ತವೆ. ಆದ್ದರಿಂದ ಇವು ಉಭಯಲಿಂಗಿ-ಗಳಾಗಿರುತ್ತವೆ.

### ಅಭ್ಯಸನಗಳು

(अ) ಕೆಳಗೆ ಕೊಟ್ಟ ನಾಮಗಳಲ್ಲಿ ಯೋಗ್ಯವಾದುದನ್ನು ಆಯ್ದುಕೊಂಡು ವಾಕ್ಯಗಳನ್ನು ಪೂರ್ಣಗೊಳಿಸಿರಿ.

#### ಪುಲ್ಲಿಂಗ

कोयला—ಇದ್ದಲಿ ಅಥವಾ ಕಲ್ಲಿದ್ದಲಿ; गहना—ಆಭರಣ; खटमल—ತಗಣಿ; गोंद—ಅಂಟು; पहिया—ಗಾಲಿ.

#### ಸ್ತ್ರೀಲಿಂಗ

ईंट—ಇಟ್ಟಂಗಿ; कुल्हाडी—ಕೊಡಲಿ; चोटी—ಶಿಖರ; जीभ—ನಾಲಿಗೆ; तस्वीर—ಚಿತ್ರ.

(1) गौरीशंकर हिमालयकी सबसे अूँची —— है। (2) लकडहारा अपनी ——से लकडी काटता है। (3) ——काला रहता है। (4) गंगाधर की किताब में अेक अच्छी —— है। (5) सायकलके दो ——होते हैं। (6) ——मनुष्यका खून चूसते हैं। (7) राज छोटी छोटी ——से दीवार बाँधता है। (8) —— काग़ज़ चिपकानेके लिये अुपयोग होता है। (9) प्रमीलाका—— बहुत सुंदर है। (10) साँपकी —— लंबी होती है।

ಕ. ಶ:— लकडहारा—ಕಟ್ಟಿಗೆ ಕಡಿದು ಮಾರುವವ; अपना—ತನ್ನ; लकडी(ಸ್ತ್ರೀ)—ಕಟ್ಟಿಗೆ; काटना—ಕಡಿಯುವದು;

खून(ಪು)-ರಕ್ತ; चूसना-ಹೀರುವದು; राज(ಪು)-ಉಪ್ಪಾರ; चिपकाना-ಅಂಟಿಸುವದು; साँप(ಪು)-ಹಾವು.

**(ब) ಹಿಂದಿಯಲ್ಲಿ ಭಾಷಾಂತರಿಸಿರಿ:—**

(1) ದೇವೇಂದ್ರನ ಟೊಪ್ಪಿಗೆಯು ಗೋಡೆಯ ಮೇಲಿದೆ. (2) ವಿಜಯಲಕ್ಷ್ಮೀಯ ಕಣ್ಣುಗಳು ಸುಂದರವಾಗಿರುತ್ತವೆ. (3) ಕೇಶವನ ಹಲ್ಲುಗಳು ಹೊಲಸಾಗಿರುತ್ತವೆ. (4) ಮಂಗನ ಬಾಲವು ಉದ್ದವಾಗಿರುತ್ತದೆ. (5) ಗಂಗಾನದಿಯು ಹಿಮಾಲಯದಿಂದ ಹೊರಡುತ್ತದೆ. (6) ಗದಿಗೆಮ್ಮನ ಬಟ್ಟೆಗಳು ಸ್ವಚ್ಛವಾಗಿರುತ್ತವೆ. (7) ಕೋಗಿಲೆಯು ಮಾವಿನ ಮರದಮೇಲೆ ಕುಳಿತು ಕೂಗಹತ್ತಿದೆ. (8) ಮುತ್ತುಗಳು ಸಮುದ್ರದಲ್ಲಿ ಸಿಗುತ್ತವೆ. (9) ಈ ಮಳೆಗಾಲದಲ್ಲಿ ಆ ಮಸೀದೆಯು ಬೀಳುತ್ತದೆ. (10) ಈ ಇಮಾಮಸಾಹೇಬರ ಗಡ್ಡವು ಉದ್ದವಾಗಿರುತ್ತದೆ.

**ಕ. ಶ:—** ಟೊಪ್ಪಿಗೆ-टोपी(ಸ್ತ್ರೀ); ಹಲ್ಲು-दाँत(ಪು); ಬಾಲ-पूँछ(ಸ್ತ್ರೀ); ಹೊರಡುವದು-निकलना; ಕೂಗುವದು-कूकना; ಮಸೀದೆ-मस्जिद(ಸ್ತ್ರೀ); ಗಡ್ಡ-दाढी(ಸ್ತ್ರೀ);

---

# पाठ 9

## वचन (ವಚನಗಳು)

ನಾಮ, ಸರ್ವನಾಮ, ವಿಶೇಷಣ ಮತ್ತು ಕ್ರಿಯಾಪದಗಳ ಸಂಖ್ಯೆಯು ಗೊತ್ತಾಗುವ ರೂಪಕ್ಕೆ ವಚನವೆನ್ನುತ್ತಾರೆ. ಕನ್ನಡದಂತೆ ಹಿಂದಿಯಲ್ಲಿಯೂ (1) ಏಕವಚನ (2) ಬಹುವಚನಗಳೆಂಬ ಎರಡೇ ವಚನಗಳುಂಟು. ವಿಭಕ್ತಿಪ್ರತ್ಯಯಗಳು ಹತ್ತದೇ ಇದ್ದಾಗ

ನಾಮಗಳು ಏಕವಚನದಿಂದ ಬಹುವಚನಕ್ಕೆ ಈ ಕೆಳಗಿನ ನಿಯಮ-ಗಳಿಗನುಸಾರವಾಗಿ ಬದಲಾವಣೆಯಾಗುತ್ತವೆ. (ನಾಮಗಳಿಗೆ ವಿಭಕ್ತಿಪ್ರತ್ಯಯಗಳು ಹತ್ತಿದಾಗ ಏಕವಚನ ಮತ್ತು ಬಹುವಚನ-ಗಳಲ್ಲಿ ಆಗುವ ಬದಲಾವಣೆಗಳನ್ನು 10ನೆಯ ಪಾಠದಲ್ಲಿ ತಿಳಿಸಿ-ಕೊಡಲಾಗಿದೆ.)

(1) आ ಕಾರಾಂತ ಪುಲ್ಲಿಂಗ ಏಕವಚನ ನಾಮಗಳು ಬಹುವಚನದಲ್ಲಿ ए ಕಾರಾಂತವಾಗುತ್ತವೆ. ಉದಾ:—

| ಏಕವಚನ | | ಬಹುವಚನ | |
|---|---|---|---|
| घोडा | ಕುದುರೆ | घोडे | ಕುದುರೆಗಳು |
| कमरा | ಕೋಣೆ | कमरे | ಕೋಣೆಗಳು |
| लडका | ಹುಡುಗ | लडके | ಹುಡುಗರು |

ಅಪವಾದಗಳು

| | | | |
|---|---|---|---|
| दादा* | ಅಜ್ಜ ಅಥವಾ ಅಣ್ಣ | दादा | ಅಜ್ಜಂದಿರು |
| नाना | ಅಜ್ಜ | नाना | ಅಜ್ಜಂದಿರು |
| राजा | ರಾಜ | राजा | ರಾಜರು |
| पिता | ತಂದೆ | पिता | ತಂದೆಯವರು |
| योद्धा | ಯೋಧ | योद्धा | ಯೋಧರು |
| चाचा | ಚಿಕ್ಕಪ್ಪ | चाचा | ಚಿಕ್ಕಪ್ಪನವರು |
| मामा | ಮಾವ | मामा | ಮಾವಂದಿರು |
| नेता | ಮುಖಂಡ | नेता | ಮುಖಂಡರು |
| देवता | ದೇವತೆ | देवता | ದೇವತೆಗಳು |

* दादा—ತಂದೆಯ ತಂದೆ; नाना—ತಾಯಿಯ ತಂದೆ.

ಇತ್ಯಾದಿ ನಾಮಗಳು ಬಹುವಚನದಲ್ಲಿ ಎ ಕಾರಾಂತವಾಗುವದಿಲ್ಲ.

(2) ಇನ್ನುಳಿದ ಪುಲ್ಲಿಂಗ ನಾಮಗಳ ಏಕವಚನ ಬಹುವಚನಗಳೆರಡರ ರೂಪಗಳು ಒಂದೇ ರೀತಿಯಾಗಿರುತ್ತವೆ. ಉದಾ:—

| ಏಕವಚನ | | ಬಹುವಚನ | |
|---|---|---|---|
| पेड़ | ಗಿಡ | पेड | ಗಿಡಗಳು |
| मोती | ಮುತ್ತು | मोती | ಮುತ್ತುಗಳು |
| भाई | ಸಹೋದರ | भाई | ಸಹೋದರರು |
| साधु | ಸಾಧು | साधु | ಸಾಧುಗಳು |
| डाकू | ಲೂಟಿಗಾರ | डाकू | ಲೂಟಿಗಾರರು |

(3) अ ಕಾರಾಂತ ಸ್ತ್ರೀಲಿಂಗ ನಾಮಗಳ ಅಂತ್ಯ अ ವನ್ನು एँ ಮಾಡುವದರಿಂದ ಅವುಗಳ ಬಹುವಚನದ ರೂಪಗಳಾಗುತ್ತವೆ. ಉದಾ:—

| ಏಕವಚನ | | ಬಹುವಚನ | |
|---|---|---|---|
| किताब | ಪುಸ್ತಕ | किताबें | ಪುಸ್ತಕಗಳು |
| आँख | ಕಣ್ಣು | आँखें | ಕಣ್ಣುಗಳು |
| भैंस | ಎಮ್ಮೆ | भैंसें | ಎಮ್ಮೆಗಳು |

(4) इ ಕಾರಾಂತ ಸ್ತ್ರೀಲಿಂಗ ಏಕವಚನ ನಾಮಗಳ ಮುಂದೆ याँ ಜೋಡಿಸುವದರಿಂದ ಅವುಗಳ ಬಹುವಚನದ ರೂಪಗಳಾಗುತ್ತವೆ. ಉದಾ:—

| ಏಕವಚನ | | ಬಹುವಚನ | |
|---|---|---|---|
| तिथि | ತಿಥಿ | तिथियाँ | ತಿಥಿಗಳು |
| रीति | ರೀತಿ | रीतियाँ | ರೀತಿಗಳು |
| शक्ति | ಶಕ್ತಿ | शक्तियाँ | ಶಕ್ತಿಗಳು |

(5) ई ಕಾರಾಂತ ಸ್ತ್ರೀಲಿಂಗ ನಾಮಗಳ ई ಯನ್ನು ಹ್ರಸ್ವಮಾಡಿ ಆದರ ಮುಂದೆ याँ ಜೋಡಿಸುವದರಿಂದ ಅವುಗಳ ಬಹುವಚನದ ರೂಪಗಳಾಗುತ್ತವೆ. ಉದಾ:—

| ಏಕವಚನ | | ಬಹುವಚನ | |
|---|---|---|---|
| टोपी | ಟೊಪ್ಪಿಗೆ | टोपियाँ | ಟೊಪ್ಪಿಗೆಗಳು |
| घडी | ಗಡಿಯಾರ | घड़ियाँ | ಗಡಿಯಾರಗಳು |
| टोकरी | ಬುಟ್ಟಿ | टोकरियाँ | ಬುಟ್ಟಿಗಳು |

(6) या ಕಾರಾಂತ ಸ್ತ್ರೀಲಿಂಗ ಏಕವಚನ ನಾಮಗಳ ಅಂತ್ಯ या ದ ಮೇಲೆ ಅರ್ಧಚಂದ್ರ ಬಿಂದು (ँ) ಇಡುವದರಿಂದ ಅವುಗಳ ಬಹುವಚನದ ರೂಪಗಳಾಗುತ್ತವೆ. ಉದಾ:—

| ಏಕವಚನ | | ಬಹುವಚನ | |
|---|---|---|---|
| चिडिया | ಪಕ್ಷಿ | चिडियाँ | ಪಕ್ಷಿಗಳು |
| बुढिया | ಮುದುಕಿ | बुढियाँ | ಮುದುಕಿಯರು |
| कुटिया | ಗುಡಿಸಲು | कुटियाँ | ಗುಡಿಸಲುಗಳು |
| चुहिया | ಹೆಣ್ಣಿಲಿ | चुहियाँ | ಹೆಣ್ಣಿಲಿಗಳು |
| गुडिया | ಹೆಣ್ಣುಗೊಂಬಿ | गुडियाँ | ಹೆಣ್ಣುಗೊಂಬಿಗಳು |

(7) ಇನ್ನುಳಿದ ಎಲ್ಲ ಸ್ತ್ರೀಲಿಂಗ ನಾಮಗಳ ಮುಂದೆ एँ ಜೋಡಿಸುವದರಿಂದ ಅವುಗಳ ಬಹುವಚನದ ರೂಪಗಳಾಗುತ್ತವೆ. ऊ ಕಾರಾಂತ ನಾಮಗಳು ಬಹುವಚನದಲ್ಲಿ ಹ್ರಸ್ವವಾಗುತ್ತವೆ. ಉದಾ:—

| ಏಕವಚನ | | ಬಹುವಚನ | |
|---|---|---|---|
| भाषा | ಭಾಷೆ | भाषाएँ | ಭಾಷೆಗಳು |

| | | | |
|---|---|---|---|
| वस्तु | ವಸ್ತು | वस्तुअें | ವಸ್ತುಗಳು |
| गौ | ಆಕಳು | गौअें | ಆಕಳುಗಳು |
| बहू | ಸೊಸೆ | बहुअें | ಸೊಸೆಯಂದಿರು |
| लू | ಉಷ್ಣತೆ | लुअें | ಉಷ್ಣತೆಗಳು |

(8) सरसों(ಸ್ತ್ರೀ)–ಸಾಸಿವೆ ಇದು ಏಕವಚನ ಮತ್ತು ಬಹುವಚನಗಳೆರಡರಲ್ಲಿಯೂ ಒಂದೇ ರೀತಿಯಾಗಿರುತ್ತದೆ. ಉದಾ:— सरसों – ಸಾಸಿವೆ (ಏ. ವ.); सरसों – ಸಾಸಿವೆ-ಗಳು (ಬ. ವ).

## ಅಭ್ಯಸನಗಳು

(अ) ತೆರವಿದ್ದ ಸ್ಥಳದಲ್ಲಿ ಕಂಸಿನಲ್ಲಿ ಕೊಟ್ಟ ನಾಮದ ಯೋಗ್ಯ ವಚನವನ್ನು ತುಂಬಿ ವಾಕ್ಯಗಳನ್ನು ಪೂರ್ಣಮಾಡಿರಿ.

1) अुस तांगेवालेके पास दो——हैं। (घोडा)
2) सईदा की तीनों——अलीगढ मे पढती हैं। (बहन)
3) स्त्रियाँ अपने हाथों में——पहनती हैं। (चूडी)
4) यह——बहुत मोटा है। (कपडे)
5) भारत मे कअी मशहूर——हैं। (नेता)
6) अुस दूकानदार के पास चार——हैं। (साइकल)
7) जंगल मे——रहते हैं। (शेर)
8) अलमारी मे चाँदीकी अेक——है। (थालियाँ)
9) हाथी के—बडे और—छोटी होती हैं। (कान,आँख)
10) ये——बहुत मीठे हैं। (फल)

**ಕ. ಶ:—** चूडी(ಸ್ತ್ರೀ)–ಬಳೆ; मशहूर–ಪ್ರಸಿದ್ಧ; थाली (ಸ್ತ್ರೀ)–ತಾಟು; कान(ಪು)–ಕಿವಿ.

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಶಾಮಲೆಯ ಕಣ್ಣುಗಳು ಸುಂದರವಾಗಿರುತ್ತವೆ. (2) ಆ ಅರಣ್ಯದಲ್ಲಿ ಎರಡು ಝರಿಗಳು ಹರಿಯುತ್ತವೆ. (3) ಮುದುಕಿಯ ಹತ್ತಿರ ಹತ್ತು ಬುಟ್ಟಿಗಳು ಇರುತ್ತವೆ. (4) ಬೇವಿನ ಮರದಮೇಲೆ ನಾಲ್ಕು ಗಿಳಿಗಳು ಇರುತ್ತವೆ. (5) ವಸಂತರಾಯರ ಮನೆಯಲ್ಲಿ ಅನೇಕ ಸೇವಕರಿರುತ್ತಾರೆ. (6) ಭಾರತ ದೇಶದಲ್ಲಿ ಬಹಳ ಎತ್ತರವಾದ ಪರ್ವತಗಳಿರುತ್ತವೆ. (7) ಬಸವಂತನು ದಿನಾಲು ಎಷ್ಟು ರೊಟ್ಟಿಗಳನ್ನು ತಿನ್ನುತ್ತಾನೆ? (8) ಒಂದು ಕೈಯಲ್ಲಿ ಐದು ಬೆರಳುಗಳಿರುತ್ತವೆ. (9) ಒಕ್ಕಲಿಗನ ಮನೆಯಲ್ಲಿ ಅನೇಕ ಸಲಿಕೆಗಳಿರುತ್ತವೆ. (10) ಶಕುಂತಲೆಯ ನಾಲ್ವರೂ ಮಾವಂದಿರು ಬಾಗಲಕೋಟೆಯಲ್ಲಿ ಇರುತ್ತಾರೆ.

**ಕ. ಶ:—** ಅರಣ್ಯ–जंगल (ಪು); ಝರಿ–झरना (ಪು); ಹರಿಯುವದು–बहना; ಬುಟ್ಟಿ–टोकरी(ಸ್ತ್ರೀ); ಬೇವಿನಮರ–नीमकापेड; ಗಿಳಿ–तोता (ಪು); ಸಲಿಕೆ–फावडा (ಪು); ನಾಲ್ವರೂ–चारों ।

---

# पाठ 10

## कारकचिह्न (ವಿಭಕ್ತಿ ಪ್ರತ್ಯಯಗಳು)

ಕನ್ನಡ ವಿಭಕ್ತಿ ಪ್ರತ್ಯಯಗಳಂತೆ ಹಿಂದಿಯಲ್ಲಿಯೂ ವಿಭಕ್ತಿ ಪ್ರತ್ಯಯಗಳಿರುತ್ತವೆ.

| ಕಾರಕಗಳು | | ಹಿಂದಿ ವಿಭಕ್ತಿ ಪ್ರತ್ಯಯಗಳು | ಕನ್ನಡ ವಿಭಕ್ತಿ ಪ್ರತ್ಯಯಗಳು |
|---|---|---|---|
| ಪ್ರಥಮಾ | ಕರ್ತೃ | ने | ಉ |
| ದ್ವಿತೀಯಾ | ಕರ್ಮ | को | ಅನ್ನು |
| ತೃತೀಯಾ | ಕರಣ (ಸಾಧನ) | से | ಇಂದಿ |
| ಚತುರ್ಥಿ | ಸಂಪ್ರದಾನ (ಕೊಡುವಿಕೆ) | को, केलिये केवास्ते | ಗೆ, ಇಗೆ, ಅಕ್ಕೆ, ಸಲುವಾಗಿ |
| ಪಂಚಮಿ | ಅಪಾದಾನ (ಅಗಲುವಿಕೆ) | से | ಇಂದ |
| ಷಷ್ಠಿ | ಸಂಬಂಧ | का, के, की | ಅ (ನ, ಳ, ರ, ಯ) |
| ಸಪ್ತಮಿ | ಅಧಿಕರಣ | में, पर | ಅಲ್ಲಿ, ಮೇಲೆ |
| ಅಷ್ಟಮಿ | ಸಂಬೋಧನ | अे, ओ, हे, अरे | ಎ, ಏ, ಇರಾ |

ನಾಮಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಅವು ಈ ಕೆಳಗಿನಂತೆ ರೂಪತಾಳುತ್ತವೆ.

(1) आ ಕಾರಾಂತ ಪುಲ್ಲಿಂಗ ಏಕವಚನ ನಾಮಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತಿದರೆ ಅವು अे ಕಾರಾಂತವಾಗುತ್ತವೆ. ಉದಾ:— लडका+ने=लडकेने; कमरा+में=कमरे में; ಆದರೆ ಹಿಂದಿನ ಪಾಠದಲ್ಲಿ ಹೇಳಿವ ಅಪವಾದ ನಾಮಗಳಾದ दादा, नाना, चाचा ಇತ್ಯಾದಿ आ ಕಾರಾಂತ ಪುಲ್ಲಿಂಗ ಏಕವಚನ ನಾಮಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತಿದರೆ ಅವುಗಳಲ್ಲಿ ಯಾವದೇ ಬದಲಾವಣೆ ಆಗುವದಿಲ್ಲ. ಉದಾ:— दादा+को=दादाको, नाना+में=नाना में, चाचा+पर=चाचापर ಇತ್ಯಾದಿ.

(2) ಇನ್ನುಳಿದ ಎಲ್ಲ ಪುಲ್ಲಿಂಗ ಹಾಗು ಸ್ತ್ರೀಲಿಂಗ ಏಕವಚನ ನಾಮುಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಅವುಗಳಲ್ಲಿ ಯಾವದೇ ಬದಲಾವಣೆಯಾಗುವದಿಲ್ಲ. ಉದಾ:— घर+का=घरका; सभा+में=सभा में; भाई+का=भाईका; लडकी+से=लडकी से; वस्तु+में=वस्तु में; बहू+के=बहूके; डाकू+की=डाकूकी ಇತ್ಯಾದಿ.

(3) अ, आ ಕಾರಾಂತ ಪುಲ್ಲಿಂಗ ಹಾಗು अ ಕಾರಾಂತ ಸ್ತ್ರೀಲಿಂಗ ಬಹುವಚನ ನಾಮುಗಳು ವಿಭಕ್ತಿ ಪ್ರತ್ಯಯಗಳು ಹತ್ತುವಾಗ ओं ಕಾರಾಂತವಾಗುತ್ತವೆ. ಉದಾ:— पैर+में=पैरों में; गधे+पर=गधोंपर; किताबें+का=किताबोंका ಇತ್ಯಾದಿ.

(4) ಬಹುವಚನದಲ್ಲಿ ए ಕಾರಾಂತವಾಗದೇ ಇದ್ದ दादा, नाना, चाचा ಇತ್ಯಾದಿ ಪುಲ್ಲಿಂಗ ಬಹುವಚನ ನಾಮುಗಳಿಗೆ, उ ಕಾರಾಂತ ಪುಲ್ಲಿಂಗ ಬಹುವಚನ ನಾಮುಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಅವುಗಳ ಮುಂದೆ ओं ಬರುತ್ತದೆ. ಉದಾ:— दादा+को=दादाओंको; नाना+पर=नानाओंपर; चाचा+से=चाचाओंसे; साधु+को=साधुओंको ಇತ್ಯಾದಿ.

(5) इ ಕಾರಾಂತ ಪುಲ್ಲಿಂಗ ಬಹುವಚನ ನಾಮುಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಅವುಗಳ ಮುಂದೆ यों ಬರುತ್ತದೆ. ಉದಾ:— पति + पर = पतियोंपर; मुनि + का = मुनियोंका ಇತ್ಯಾದಿ.

(6) ई ಕಾರಾಂತ ಪುಲ್ಲಿಂಗ ಬಹುವಚನ ನಾಮುಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಅವುಗಳ ಅಂತ್ಯ ದೀರ್ಘಸ್ವರವು

ಹ್ರಸ್ವವಾಗಿ ಮುಂದೆ यों ಬರುತ್ತದೆ. ಉದಾ:— मोती+को= मोतियोंको, भाभी+का=भाभियोंका ಇತ್ಯಾದಿ.

(7) इ, ई ಕಾರಾಂತ ಮತ್ತು या ಕಾರಾಂತ ಸ್ತ್ರೀಲಿಂಗ ಬಹುವಚನ ನಾಮಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಅವು-ಗಳ ಅಂತ್ಯ याँ ದ ಸ್ಥಳದಲ್ಲಿ यों ಬರುತ್ತದೆ. ಉದಾ:— तिथियाँ+को=तिथियोंको, लडकियाँ + को = लडकियोंको, बुढियाँ+ने=बुढियोंने ಇತ್ಯಾದಿ.

(8) आ, अु, अू ಹಾಗು औ ಕಾರಾಂತ ಸ್ತ್ರೀಲಿಂಗ ಬಹುವಚನ ನಾಮಗಳಿಗೆ ವಿಭಕ್ತಿ ಪ್ರತ್ಯಯಗಳು ಸೇರುವಾಗ ಅವು-ಗಳ ಅಂತ್ಯ अें ದ ಸ್ಥಳದಲ್ಲಿ ओं ಬರುತ್ತದೆ. ಉದಾ:— भाषाअें+से=भाषाओंसे; वस्तुअें+से=वस्तुओंसे, वस्तुअें+पर=वस्तुओंपर; बहुअें+का=बहुओंका; गौअें+के=गौओंके ಇತ್ಯಾದಿ.

(9) अू ಕಾರಾಂತ ಪುಲ್ಲಿಂಗ ಬಹುವಚನ ನಾಮಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಅವುಗಳ ಅಂತ್ಯ ದೀರ್ಘವು ಹ್ರಸ್ವವಾಗಿ ಮುಂದೆ ओं ಬರುತ್ತದೆ. ಉದಾ:— डाकू+से= डाकुओंसे, लड्डू+में=लड्डुओंमें ಇತ್ಯಾದಿ.

(10) सरसों–ಸಾಸಿವೆ, ಇದು ಎರಡೂ ವಚನಗಳಲ್ಲಿ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಯಾವದೇ ಬದಲಾವಣೆ ಹೊಂದುವದಿಲ್ಲ. ಉದಾ:— सरसों+को=सरसोंको–ಸಾಸಿವೆ-ಯನ್ನು; सरसों+को=सरसोंको–ಸಾಸಿವೆಗಳನ್ನು ಇತ್ಯಾದಿ.

ಮೇಲಿನ ನಿಯಮಗಳಿಗನುಸರಿಸಿ ನಡೆಯುವಂತಹ ಮೂರು ಶಬ್ದಗಳನ್ನು ಇಲ್ಲಿ ನಡಿಸಿ ತೋರಿಸಲಾಗಿದೆ.

## किताब ಪುಸ್ತಕ

| | ಏಕವಚನ | | ಬಹುವಚನ | |
|---|---|---|---|---|
| ಪ್ರ. | किताब+ने=किताबने | ಪುಸ್ತಕವು | किताबें+ने=किताबोंने | ಪುಸ್ತಕಗಳು |
| ದ್ವಿ. | किताबको | ಪುಸ್ತಕವನ್ನು | किताबोंको | ಪುಸ್ತಕಗಳನ್ನು |
| ತೃ. | किताबसे | ಪುಸ್ತಕದಿಂದ | किताबोंसे | ಪುಸ್ತಕಗಳಿಂದ |
| ಚ. | किताबको | ಪುಸ್ತಕಕ್ಕೆ | किताबोंको | ಪುಸ್ತಕಗಳಿಗೆ |
| | किताबके लिये, किताबके वास्ते | ಪುಸ್ತಕದ ಸಲುವಾಗಿ | किताबोंके लिये, किताबोके वास्ते | ಪುಸ್ತಕಗಳ ಸಲುವಾಗಿ |
| ಪಂ. | किताबसे | ಪುಸ್ತಕದಿಂದ | किताबोंसे | ಪುಸ್ತಕಗಳಿಂದ |
| ಷ. | किताबका, किताबके, किताबकी | ಪುಸ್ತಕದ | किताबोंका, किताबोंके, किताबोंकी | ಪುಸ್ತಕಗಳ |
| ಸ. | किताब में | ಪುಸ್ತಕದಲ್ಲಿ | किताबों में | ಪುಸ್ತಕಗಳಲ್ಲಿ |
| | किताबपर | ಪುಸ್ತಕದಮೇಲೆ | किताबोंपर | ಪುಸ್ತಕಗಳಮೇಲೆ |

## नेता ಮುಖಂಡ

| | ಏಕವಚನ | | ಬಹುವಚನ | |
|---|---|---|---|---|
| ಪ್ರ. | नेता+ने=नेताने | ಮುಖಂಡನು | नेता+ने=नेताओंने | ಮುಖಂಡರು |
| ದ್ವಿ. | नेताको | ಮುಖಂಡನನ್ನು | नेताओंको | ಮುಖಂಡರನ್ನು |

| | | |
|---|---|---|
| ತೃ. | नेतासे ಮುಖಂಡನಿಂದ | नेताओंसे ಮುಖಂಡರಿಂದ |
| ಚ. | नेताको ಮುಖಂಡನಿಗೆ | नेताओंको ಮುಖಂಡರಿಗೆ |
| | नेताकेलिये, नेताकेवास्ते } ಮುಖಂಡನ ಸಲುವಾಗಿ | नेताओंकेलिये, नेताओंकेवास्ते } ಮುಖಂಡರ ಸಲುವಾಗಿ |
| ಪಂ. | नेतासे ಮುಖಂಡನಿಂದ | नेताओंसे ಮುಖಂಡರಿಂದ |
| ಷ. | नेताका, नेताके, नेताकी } ಮುಖಂಡನ | नेताओका, नेताओंके, नेताओकी } ಮುಖಂಡರ |
| ಸ. | नेतामें ಮುಖಂಡನಲ್ಲಿ | तेताओंमे ಮುಖಂಡರಲ್ಲಿ |
| | नैतापर ಮುಖಂಡನಮೇಲೆ | नेताओंपर ಮುಖಂಡರಮೇಲೆ |

## धोती ಧೋತರ

| | ಏಕವಚನ | ಬಹುವಚನ |
|---|---|---|
| ಪ್ರ. | धोती+ने=धोतीने ಧೋತರವು | धोतियाँ+ने=धोतियोंने ಧೋತರಗಳು |
| ದ್ವಿ. | धोतीको ಧೋತರವನ್ನು | धोतियोंको ಧೋತರಗಳನ್ನು |
| ತೃ. | धोतीसे ಧೋತರದಿಂದ | धीतियोंसे ಧೋತರಗಳಿಂದ |
| ಚ. | धोतीको ಧೋತರಕ್ಕೆ | धोतियोंको ಧೋತರಗಳಿಗೆ |
| | धोतीकेलिये, धोतीकेवास्ते } ಧೋತರ ಸಲುವಾಗಿ | धोतियोंकेलिये, धोतियोंकेवास्ते } ಧೋತರಗಳ ಸಲುವಾಗಿ |
| ಪಂ. | धोतीसे ಧೋತರದಿಂವ | धोतियोंसे ಧೋತರಗಳಿಂದ |
| ಷ. | धोतीका, धोतीके, धोतीकी } ಧೋತರದ | धोतियोंका, धोतियोंके, धोतियोंकी } ಧೋತರಗಳ |

ಸ. धोतीमें ಧೋತರದಲ್ಲಿ धोतियोंमें ಧೋತರಗಳಲ್ಲಿ
धोतीपर ಧೋತರದಮೇಲೆ धोतियोंपर ಧೋತರಗಳಮೇಲೆ

## ಅಭ್ಯಸನಗಳು

(अ) ಕಂಸಿನಲ್ಲಿ ಕೊಟ್ಟ ಶಬ್ದಗಳಿಗೆ ಯೋಗ್ಯ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಿ ವಾಕ್ಯಗಳನ್ನು ಪೂರ್ಣಮಾಡಿರಿ.

(1) हम——देखते हैं। (आँखें) (2) आदमी ——चलते हैं। (पैर) (3) दूध——बहुत पसंद है। (बिल्ली) (4) पुलिस——पकडती है। (डाकू ಬ.ವ) (5) हम——आरहे हैं। (पाठशाला) (6) —— बंदर कूद रहे हैं। (पेड) (7) मरियम——घूमरही है। (बगीचा) (8) ——अमावट बनाते हैं। (आम ಬ.ವ) (9) ऊँटकी——बडा बल होता है। (टाँग) (10) अध्यापक——हिन्दी पढा रहे हैं। (लडके)।

**ಕ. ಶ:**— आदमी (ಪು)–ಮನುಷ್ಯ; पुलिस (ಸ್ತ್ರೀ)–ಪೋಲೀಸದಳ; कूदना–ಜಿಗಿಯುವದು; बगीचा (ಪು)–ತೋಟ; अमावट (ಸ್ತ್ರೀ)–ಸೀಕರ್ಣಿ; टाँग (ಸ್ತ್ರೀ)–ಕಾಲು.

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಗೋಪಾಲನ ಮನೆಯಲ್ಲಿ ಎಷ್ಟು ಜನ ಇರುತ್ತಾರೆ.
(2) ಮೋಹನನ ಅಂಗಡಿಗಳಲ್ಲಿ ಬಹಳ ಜನರು ಕೆಲಸಮಾಡುತ್ತಾರೆ.
(3) ಆ ಹೆಣ್ಣುಮಗಳು ಮಾಲೆಗಳನ್ನು ಮಾರುತ್ತಿದ್ದಾಳೆ.
(4) ಇತ್ತೀಚೆಗೆ ಹುಂಡೇಕಾರ ಮಾಸ್ತರರು ಧಾರವಾಡಲ್ಲಿ ಇರುತ್ತಾರೆ.

(5) ಇಂದಿನ ಸಭೆಯಲ್ಲಿ ಜವಾಹರರು ಮಾತನಾಡುವರು. (6) ಗುರುನಾಥಪ್ಪ ಮಾಸ್ತರರು ಹೆಣ್ಣುಮಕ್ಕಳಿಗೆ ಹಿಂದಿ ಕಲಿಸು-ತ್ತಿದ್ದಾರೆ. (7) ನಿಜಲಿಂಗ, ನೀನು ಕೆಂಪು ಮಸಿಯಿಂದ ಏಕೆ ಬರೆಯುತ್ತಿರುವಿ? (8) ಗುಂಗೀ ಹುಳಗಳು ಹೂಗಳ ಮೇಲೆ ಕುಳಿತುಕೊಳ್ಳುತ್ತವೆ. (9) ಮೋಡಗಳಿಂದ ಮಳೆ ಸುರಿಯುತ್ತಿದೆ. (10) ಈ ಗಾಡಿಯು ಎಲ್ಲ ಸ್ಟೆಶನ್ನುಗಳಲ್ಲಿ ನಿಲ್ಲುವದಿಲ್ಲ.

ಕ. ಶ:—ಜನರು—लोग(ಪು.ಬ.ವ); ಮಾಲೆ—माला(ಸ್ತ್ರೀ); ಮಾರುವದು—बेचना; ಇತ್ತೀಚೆಗೆ—आजकल; ಕೆಂಪು—लाल; ಏಕೆ—क्यों; ಗುಂಗೀಹುಳ—भौंरा(ಪು); ಮೋಡ—बादल(ಪು); ಮಳೆಸುರಿಯುವದು—पानी बरसना; ನಿಲ್ಲುವದು—रुकना.

# पाठ 11

## का, के, की ನಿಯಮ

ವಾಕ್ಯದಲ್ಲಿ ನಾಮ ಅಥವಾ ಸರ್ವನಾಮದ ಸಂಬಂಧವು ಅನ್ಯ ವಸ್ತುವಿನೊಂದಿಗೆ ಇದೆ—ಎಂಬುದನ್ನು ಸೂಚಿಸುವದಕ್ಕೆ ಸಂಬಂಧ-ಕಾರಕವೆನ್ನುತ್ತಾರೆ. ಇದರ ಪ್ರತ್ಯಯಗಳು का, के, की ಹೀಗೆ ಮೂರು ಇರುತ್ತವೆ. ಇವುಗಳ ಪ್ರಯೋಗವು ಕೆಳಗಿನ ನಿಯಮಗಳ ಪ್ರಕಾರ ಆಗುತ್ತದೆ.

(1) ಸಂಬಂಧಕಾರಕ ಶಬ್ದಗಳ ಮುಂದಿನ ಶಬ್ದವು ಪುಲ್ಲಿಂಗ ಏಕವಚನವಾಗಿದ್ದರೆ ಆ ಸಂಬಂಧಕಾರಕ ಶಬ್ದಗಳಿಗೆ का ಪ್ರತ್ಯ-ಯವು ಹತ್ತುತ್ತದೆ. ಉದಾ:—

(1) कमलाकर का घोडा—ಕಮಲಾಕರನ ಕುದುರೆ.

(2) वामनका कुत्ता—ವಾಮನನ ನಾಯಿ.

(3) सीताका पति—ಸೀತೆಯ ಗಂಡ.

(2) ಸಂಬಂಧಕಾರಕ ಶಬ್ದಗಳ ಮುಂದಿನ ಶಬ್ದವು ಪುಲ್ಲಿಂಗ ಬಹುವಚನವಾಗಿದ್ದರೆ ಆ ಸಂಬಂಧಕಾರಕ ಶಬ್ದಗಳಿಗೆ के ಪ್ರತ್ಯಯವು ಹತ್ತುತ್ತದೆ. ಉದಾ:—

(1) कमलाकरके घोडे—ಕಮಲಾಕರನ ಕುದುರೆಗಳು.

(2) वामनके कुत्ते—ವಾಮನನ ನಾಯಿಗಳು.

(3) द्रौपदीके पति—ದ್ರೌಪದಿಯ ಗಂಡಂದಿರು ಇತ್ಯಾದಿ.

(3) ಸಂಬಂಧಕಾರಕ ಶಬ್ದಗಳ ಮುಂದಿನ ಶಬ್ದವು ಪುಲ್ಲಿಂಗ ಏಕವಚನವಾಗಿದ್ದು ಅದಕ್ಕೆ ಯಾವದೇ ವಿಭಕ್ತಿ ಪ್ರತ್ಯಯವು ಹತ್ತಿದ್ದರೆ ಆ ಸಂಬಂಧಕಾರಕ ಶಬ್ದಗಳಿಗೂ के ಪ್ರತ್ಯಯವು ಹತ್ತುತ್ತದೆ. ಉದಾ:—

(1) कमलाकर के घोडेको—ಕಮಲಾಕರನ ಕುದುರೆಗೆ.

(2) वामन के कुत्तेका—ವಾಮನನ ನಾಯಿಯ.

(3) सीताके पतिपर—ಸೀತೆಯ ಗಂಡನಮೇಲೆ ಇತ್ಯಾದಿ.

(4) ಸಂಬಂಧಕಾರಕ ಶಬ್ದಗಳ ಮುಂದಿನ ಶಬ್ದವು ಸ್ತ್ರೀಲಿಂಗ ಏಕವಚನವಾಗಲಿ ಅಥವಾ ಬಹುವಚನವೇ ಆಗಲಿ ಇದ್ದರೆ, ಆ ಸಂಬಂಧಕಾರಕ ಶಬ್ದಗಳಿಗೆ की ಪ್ರತ್ಯಯವು ಹತ್ತುತ್ತದೆ. ಉದಾ:—

(1) कमलाकरकी बकरी—ಕಮಲಾಕರನ ಆಡು.

(2) वामनकी बकरियाँ—ವಾಮನನ ಆಡುಗಳು.

(3) सीताकी बेटियाँ—ಸೀತೆಯ ಹೆಣ್ಣುಮಕ್ಕಳು, ಇ.

## ಅಭ್ಯಸನಗಳು

(अ) ಬರಿದಾದ ಸ್ಥಳಗಳಲ್ಲಿ ಯೋಗ್ಯವಾದ ಷಷ್ಠೀ ವಿಭಕ್ತಿ ಪ್ರತ್ಯಯವನ್ನು ತುಂಬಿರಿ.

(1) भरत राम——भाई था। (2) जेबुन्निसा ——पिता——नाम औरंगजेब था। (3) रहमान—— दो भाई मैसूर में पढते हैं। (4) अलकनंदा——मामा काशी में रहते हैं। (5) वनमाला——कंठ मीठा है। (6) कृष्णा दक्षिणभारत——बडी नदी है। (7) मुरघा-मठ——मेला माघ मास में होता है। (8) भीमराव ——घर में बीस लोग हैं।

(ब) ಈ ಕೆಳಗಿನ ವಾಕ್ಯಗಳಲ್ಲಿ ಪ್ರತ್ಯಯಗಳು ಸರಿಯಾಗಿಲ್ಲದಿದ್ದಲ್ಲಿ ಸರಿಪಡಿಸಿರಿ.

(1) अशोक के बहिन की नाम रमा है। (2) शिवबसप्पाजी का घर में दस नौकर हैं। (3) अब्दुलगनी का लडकी बनारस में संस्कृत पढती है। (4) अहल्या की भाई कहाँ रहता है? (5) श्रीनिवास का माँ रोटी बनारही है। (6) सुनंदाके किताब में अेक सुंदर तस्वीर है। (7) शंकरगौडके अेक बहिन है। (8) रिंदा के शादी धारवाड में हुअी।

ಪ. ಶ:— कंठ(ಪು)-ಕಂಠ, ಸ್ವರ; शादी(ಸ್ತ್ರೀ)-ಲಗ್ನ.

(क) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ವಸಂತ ಮುದ್ರಣಾಲಯದ ಒಡೆಯರು ಮಂಗೇಶ-ರಾಯರಿದ್ದಾರೆ. (2) ಭಾರತೀಯ ಸಹೋದರನ ಹೆಸರು ರಮೇಶ ಇರುತ್ತದೆ. (3) ಗಿರಿಜಾಧವನ ತಂಗಿಯ ಹೆಸರು ಗದಿಗೆವ್ವಾ ಇರುತ್ತದೆ. (4) ಅಬ್ದುಲ್‌ಖಾದರರವರ ಸಹೋದರರು ಹಿಂದಿ-ಯನ್ನು ಕಲಿಸುತ್ತಾರೆ. (5) ದಾನಪ್ಪನವರ ಅಂಗಡಿಯಲ್ಲಿ ಎಲ್ಲ ಸಾಮಾನುಗಳು ಮಾರಾಟವಾಗುತ್ತವೆ. (6) ಚೆನ್ನಬಸಯ್ಯನವರ ಮಗ ಚೆನ್ನವೀರಯ್ಯನು ಸ್ಕಾಲರಶಿಪ್ ಪರೀಕ್ಷೆಗೆ ಕೂಡ್ರುತ್ತಾನೆ. (7) ಕೋಟಿಗುರುಗಳ ಶಿಷ್ಯರು ಉತ್ತರ ಕರ್ನಾಟಕ ತುಂಬೆಲ್ಲ ಇದ್ದಾರೆ. (8) ಶ್ರೀರಂಗಪಟ್ಟಣವು ಕಾವೇರಿ ನದಿಯ ದಂಡೆಯ ಮೇಲಿದೆ. (9) ಸುಲೋಚನೆಯ ಗಂಡನ ಹೆಸರು ಏನು ಇರು-ತ್ತದೆ? (10) ಅಬ್ದುಲ್‌ರಜಾಕನ ಅಜ್ಜಿಯು ಚೆನ್ನಾಗಿ ಅಡಿಗಿ-ಮಾಡುತ್ತಾಳೆ.

**ಕ. ಶ:—** ಮಾರಾಟವಾಗುವದು_बिकना; ತುಂಬೆಲ್ಲ_भर; ದಂಡೆ_किनारा(ಪು).

# पाठ 12

## विशेषण (ವಿಶೇಷಣಗಳು)

ನಾಮ ಅಥವಾ ಸರ್ವನಾಮದ ವಿಶೇಷತೆಯನ್ನು ಪ್ರಕಟ-ಪಡಿಸುವ ಶಬ್ದಕ್ಕೆ **ವಿಶೇಷಣವೆನ್ನು**ತ್ತಾರೆ. ಉದಾ:— **छोटा** लडका—ಸಣ್ಣಹುಡುಗ, ಇಲ್ಲಿ **छोटा** ವಿಶೇಷಣವಾಗಿರುತ್ತದೆ.

ವಿಶೇಷಣದಿಂದ ವರ್ಣಿಸಲ್ಪಡುವ ನಾಮ ಅಥವಾ ಸರ್ವ-ನಾಮಕ್ಕೆ ವಿಶೇಷ್ಯವೆನ್ನುತ್ತಾರೆ. ಉದಾ:— छोटा लड़का—ಸಣ್ಣ ಹುಡುಗ. ಇಲ್ಲಿ **लड़का** ವಿಶೇಷ್ಯವಾಗಿರುತ್ತದೆ.

ವಿಶೇಷಣಗಳಲ್ಲಿ (1) ಗುಣವಾಚಕ, (2) ಸಂಖ್ಯಾವಾಚಕ, (3) ಪರಿಮಾಣವಾಚಕ ಮತ್ತು (4) ಸಾರ್ವನಾಮಿಕ ಅಥವಾ ನಿರ್ದೇಶಕ ಹೀಗೆ ನಾಲ್ಕು ಪ್ರಕಾರಗಳುಂಟು.

(1) **ಗುಣವಾಚಕ ವಿಶೇಷಣ:**— पतला – ತೆಳ್ಳನೆಯ, काला – ಕರಿಯ, भारती – ಭಾರತದ, बाहरी – ಹೊರಗಿನ, नया – ನವೀನ ಇತ್ಯಾದಿ.

(2) **ಸಂಖ್ಯಾವಾಚಕ ವಿಶೇಷಣ:**— पाँचवाँ—ಐದನೆಯ, बीस—ಇಪ್ಪತ್ತು, चौगुना—ನಾಲ್ಕುಪಟ್ಟು, तीनों—ಮೂವರೂ, ಮೂರು, ಇತ್ಯಾದಿ.

(3) **ಪರಿಮಾಣವಾಚಕ ವಿಶೇಷಣ:**— सब – ಎಲ್ಲರೂ, ಎಲ್ಲವೂ; कुल – ಒಟ್ಟು; बहुत – ಬಹಳ ಇತ್ಯಾದಿ.

(4) **ಸಾರ್ವನಾಮಿಕ ಅಥವಾ ನಿರ್ದೇಶಕ ವಿಶೇಷಣ:**— वह—ಆ, यह—ಈ, वे—ಆ, ये—ಈ.

## विशेषणोंका रूपांतर (ವಿಶೇಷಣಗಳ ರೂಪಾಂತರ)

आ ಕಾರಾಂತ ವಿಶೇಷಣಗಳು ತಮ್ಮ ವಿಶೇಷ್ಯದ ಲಿಂಗ ವಚನಕ್ಕನುಸಾರವಾಗಿ ಈ ಕೆಳಗಿನಂತೆ ಬದಲಾಗುತ್ತವೆ.

(1) ವಿಶೇಷ್ಯವು ಪುಲ್ಲಿಂಗ ಏಕವಚನವಾಗಿದ್ದರೆ आ ಕಾರಾಂತ ವಿಶೇಷಣವು ಬದಲಾಗುವದಿಲ್ಲ. ಉದಾ:— ऊँचा घोडा—ಎತ್ತರವಾದ ಕುದುರೆ.

(2) ವಿಶೇಷ್ಯವು ಪುಲ್ಲಿಂಗ ಬಹುವಚನವಾಗಿದ್ದರೆ आ ಕಾರಾಂತ ವಿಶೇಷಣವು ए ಕಾರಾಂತವಾಗುತ್ತದೆ. ಉದಾ:— ऊँचे घोड़े–ಎತ್ತರವಾದ ಕುದುರೆಗಳು.

(3) ವಿಶೇಷ್ಯವು ಪುಲ್ಲಿಂಗ ಏಕವಚನವಿದ್ದು ವಿಭಕ್ತಿ ಪ್ರತ್ಯಯವು ಹತ್ತಿದರೆ ಆಗಲೂ आ ಕಾರಾಂತ ವಿಶೇಷಣವು ए ಕಾರಾಂತವಾಗುತ್ತದೆ. ಉದಾ:— ऊँचे घोडेपर–ಎತ್ತರವಾದ ಕುದುರೆಯ ಮೇಲೆ.

(4) ವಿಶೇಷ್ಯವು ಸ್ತ್ರೀಲಿಂಗ ಏಕವಚನವಾಗಲಿ ಇಲ್ಲವೆ ಬಹುವಚನವೇ ಆಗಲಿ ಇದ್ದರೆ आ ಕಾರಾಂತ ವಿಶೇಷಣವು ई ಕಾರಾಂತವಾಗುತ್ತವೆ. ಉದಾ:—ऊँची घोडी–ಎತ್ತರವಾದ ಹೆಣ್ಣು ಕುದುರೆ, ऊँची घोडियाँ–ಎತ್ತರವಾದ ಹೆಣ್ಣು ಕುದುರೆಗಳು.

आ ಕಾರಾಂತ ವಿಶೇಷಣಗಳನ್ನುಳಿದು ಮಿಕ್ಕೆಲ್ಲ ವಿಶೇಷಣಗಳು ವಿಶೇಷ್ಯದ ಲಿಂಗ, ವಚನಕ್ಕನುಸಾರವಾಗಿ ಬದಲಾಗುವದಿಲ್ಲ. ಉದಾ:— सफेद घोडा–ಬಿಳಿ ಕುದುರೆ, सफेद घोडे–ಬಿಳಿ ಕುದುರೆಗಳು, सफेद घोडी–ಬಿಳಿ ಹೆಣ್ಣು ಕುದುರೆ, सफ़ेद घोडीयाँ–ಬಿಳಿ ಹೆಣ್ಣು ಕುದುರೆಗಳು, ಇಲ್ಲಿ सफेद ವಿಶೇಷಣವು ಬದಲಾಗದೆ ಉಳಿದುದನ್ನು ಲಕ್ಷಿಸಬೇಕು.

## ಅಭ್ಯಸನಗಳು

(अ) ಕಂಸಿನಲ್ಲಿ ಕೊಟ್ಟಿರುವ ವಿಶೇಷಣಗಳಲ್ಲಿ ಸರಿಯಾದುದನ್ನು ಆರಿಸಿ ಬರಿದಾದ ಸ್ಥಳದಲ್ಲಿ ತುಂಬಿರಿ.

(1) शांता——साडियाँ पसंद करती हैं। (हरा, ऊँचा, मीठा) (2) यह——लडकी किसकी बहिन है?

(गोरा, खट्टा, फीका) (3) तुंगभद्रा का पानी बहुत ——है। (पतला, मोटा, मीठा) (4) ——चाय् लोग नहीं पीते। (गरम, ठंडा, अच्छा) (5) नारियलके पेड ——होते हैं। (नाटा, मोटा, ऊँचा) (6) शशिकला ——बातें करती है। (मीठामीठा, खट्टाखट्टा, कडुआ) (7) यह खेलका मैदान बहुत——है। (सस्ता, चौडा, लाल) (8) तुम फल मत खाओ। (मीठा, गरम, खट्टा) (9) आसमानका रंग——है। (अुजला, काला, नीला) (10) चमेली की खुशबू बहुत——है। (बुरी, अच्छा, लंबा)

**क. श:—** हरा—ಹಸಿರಾದ; गोरा—ಗೌರವರ್ಣದ; खट्टा—ಹುಳಿಯಾದ; फीका ಸಪ್ಪಗೆ ಇದ್ದ; पतला—ತೆಳ್ಳನೆಯ; मोटा—ದಪ್ಪನಾದ; मीठा—ಸಿಹಿಯಾದ; नाटा—ಗಿಡ್ಡನೆಯ; कडुआ—ಕಹಿಯಾದ; सस्ता—ಅಗ್ಗವಾದ; चौडा—ಅಗಲವಾದ; अुजला—ಬಿಳುಪಾದ; चमेली—ಮಲ್ಲಿಗೆ; खुशबू—ಸುವಾಸನೆ.

(ब) **ಹಿಂದಿಯಲ್ಲಿ ಭಾಷಾಂತರಿಸಿರಿ:—**

(1) ಉಮೇಶನು ಒಳ್ಳೆಯ ಹುಡುಗನಿರುತ್ತಾನೆ. (2) ಆ ಕಪ್ಪು ಹುಡುಗಿ ಯಾವಳಿರುತ್ತಾಳೆ? (3) ಬಕುಲಾವಲಿಕಾ ಹನ್ನೆರಡು ಹಳದಿ ಬಾಳೆಹಣ್ಣುಗಳನ್ನು ತಿನ್ನುತ್ತಾಳೆ. (4) ಖಾದಿ ಬಟ್ಟೆಗಳು ಬಹಳ ತುಟ್ಟಿಯಾಗಿರುತ್ತವೆ. (5) ಹುಳಿಯಾದ ಮಜ್ಜಿಗೆಯನ್ನು ಕುಡಿಯಬೇಡಿರಿ. (6) ಧಾರವಾಡದ ಸುಭಾಸ ರೋಡು ಬಹಳ ಅಗಲವಾದ ಹಾದಿಯಾಗಿರುವದಿಲ್ಲ. (7) ಮೋತಿ-

ತಾಲಾಬದ ನೀರು ಬಹಳ ಹೊಲಸಾಗಿರುತ್ತದೆ. (8) ಅವರ ಹಿಂದಿ ವಿದ್ಯಾಲಯದ ಹುಡುಗರು ಸ್ವಚ್ಛವಾದ ಬಟ್ಟೆಗಳನ್ನು ತೊಡುತ್ತಾರೆ. (9) ಹಿಮಾಲಯವು ಬಹಳ ದೊಡ್ಡ ಪರ್ವತವಾಗಿದೆ. (10) ಕುಮುದ್ವತಿ ನದಿಯು ಬಹಳ ಚಿಕ್ಕದಾಗಿರುತ್ತದೆ.

**ಕ. ಶ:**— ಹಳದಿ–पीला; ಬಾಳೆಹಣ್ಣು–केला; ತುಟ್ಟಿ–महँगा; ಮಜ್ಜಿಗೆ–छाँछ(स्त्री); ಹೊಲಸು–गंदा.

---

# पाठ 13

## क्रियाविशेषण (ಕ್ರಿಯಾವಿಶೇಷಣಗಳು)

ಕ್ರಿಯಾಪದದ ವಿಶೇಷತೆಯನ್ನು ಸೂಚಿಸುವ ಶಬ್ದಕ್ಕೆ ಕ್ರಿಯಾ ವಿಶೇಷಣವೆನ್ನುತ್ತಾರೆ.

ಕ್ರಿಯಾವಿಶೇಷಣಗಳಲ್ಲಿ ಅರ್ಥದ ದೃಷ್ಟಿಯಿಂದ (1) ಕಾಲವಾಚಕ, (2) ಸ್ಥಾನವಾಚಕ, (3) ಪರಿಮಾಣವಾಚಕ ಮತ್ತು (4) ರೀತಿವಾಚಕಗಳೆಂಬ ನಾಲ್ಕು ಪ್ರಕಾರಗಳುಂಟು. ಉದಾ:—

(1) **ಕಾಲವಾಚಕ:**—आज–ಇಂದು; आजकल–ಇತ್ತೀಚೆಗೆ; दिनभर–ಇಡೀದಿವಸ; सतत–ಯಾವಾಗಲೂ ಇತ್ಯಾದಿ.

(2) **ಸ್ಥಾನವಾಚಕ:**— यहाँ–ಇಲ್ಲಿ; आगे–ಮುಂದೆ; भीतर–ಒಳಗೆ; चारोंओर–ನಾಲ್ಕೂ ಕಡೆಗೆ ಇತ್ಯಾದಿ.

(3) **ಪರಿಮಾಣವಾಚಕ:**— बहुत–ಬಹಳ; थोडा–ಸ್ವಲ್ಪ; बडा–ದೊಡ್ಡ; काफी–ಸಾಕಷ್ಟು ಇತ್ಯಾದಿ.

(4) **ರೀತಿವಾಚಕ:**— अकाअक–ಒಮ್ಮೆಲೆ; इसलिये–ಆದ್ದರಿಂದ; धीरेधीरे–ಮೆಲ್ಲನೆ; जल्दी–ಬೇಗನೆ ಇತ್ಯಾದಿ.

ಕ್ರಿಯಾವಿಶೇಷಣಗಳು ಅವ್ಯಯಗಳಾಗಿರುತ್ತವೆ. ಇವುಗಳ ಸಂಬಂಧವು ನೇರವಾಗಿ ಕ್ರಿಯಾಪದದೊಡನೆ ಇರುತ್ತದೆ.

(अ) ಕಂಸಿನಲ್ಲಿ ಕೊಟ್ಟ ಕ್ರಿಯಾವಿಶೇಷಣಗಳಲ್ಲಿ ಯೋಗ್ಯ-ವಾದುದನ್ನು ಆರಿಸಿ ಬರಿದಾದ ಸ್ಥಳದಲ್ಲಿ ತುಂಬಿರಿ.

(1) ——चीजोंका दाम बहुत बढगया है। (आजकल, दिनभर, सामने) (2) ——कामकरके मजदूर थकगया। (थोडा,धीरेधीरे,दिनभर) (3) रामदास इतनी——कहाँ जारहा है? (अेकाअेक, जल्दी, थोडा) (4) गरमी बहुत है——शरबत पीजिये। (थोडा, चारोंओर, सतत) (5) मैं——शोभा के साथ स्कूल जाता हूँ। (जल्दी, तब, रोज) (6) ——चलो, नहींतो गिरोगे। (तेज, धीरेधीरे, काफी) (7) खूब पानी बरसनेसे——पानीही पानी होगया। (आगे, भीतर, चारोंओर) (8) गरीब——झोपडियों में वास करते हैं। (बहुत, अक्सर, कुछ) (9) प्रामाणिक मनुष्य ——झूठ नहीं बोलता। (कभी, अेकबार, यहाँ) (10) प्रेमा मेरे घर——आती है। (बारबार, इतना, काफी)

ಕ. ಶ:— चीज(ಸ್ತ್ರೀ)-ವಸ್ತು; दाम(ಪು)-ಬೆಲೆ; मजदूर(ಪು)-ಕೂಲಿಕಾರ; तेज-ವೇಗವಾಗಿ; अक्सर-ಹೆಚ್ಚಾಗಿ बारबार-ಮೇಲಿಂದಮೇಲೆ; कभी-ಎಂದೂ; धीरेधीरे-ಮೆಲ್ಲನೆ.

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಆ ನಾಯಿಯು ಬಹಳ ವೇಗವಾಗಿ ಓಡುತ್ತದೆ. (2) ಮನೆಯ ಒಳಗೆ ಜನರು ಇದ್ದಾರೆ. (3) ನಾನು ಕೇವಲ ಐದು ಮಾವಿನಹಣ್ಣುಗಳನ್ನು ತಿನ್ನುತ್ತೇನೆ. (4) ಲಲಿತಾ ಒಮ್ಮೊಮ್ಮೆ ಸಿನೇಮಾಕ್ಕೆ ಹೋಗುತ್ತಾಳೆ. (5) ಇಂದು ಬಹಳ ಗಟ್ಟಿಯಾಗಿ ಮಳೆ ಬರಹತ್ತಿದೆ. (6) ಬೇಸಿಗೆಯಲ್ಲಿ ಬಿಸಿಲು ಬಹಳ ಆದ್ದರಿಂದ ಶ್ರೀಮಂತರು ಉದಕಮಂಡಲಕ್ಕೆ ಹೋಗುತ್ತಾರೆ. (7) ಕುಡಿಯಲು ಸ್ವಲ್ಪ ತಣ್ಣೀರು ಕೊಡಿರಿ. (8) ಕೂಡಲೆ ಹೊರಡಿರಿ ಗಾಡಿ ಬರುತ್ತಲಿದೆ. (9) ಇವರು ಯಾವಾಗಲೂ ಹಿಂದಿಯಲ್ಲಿ ಮಾತನಾಡುತ್ತಾರೆ. (10) ಇತ್ತೀಚೆಗೆ ರಾಜಾಜಿಯವರು ಎಲ್ಲಿ ಇರುತ್ತಾರೆ?

ಕ. ಶ:— ಕೇವಲ-सिर्फ; ಒಮ್ಮೊಮ್ಮೆ-कभीकभी; ಕೂಡಲೆ-फौरन, जल्दी.

## पाठ 14

### सर्वनाम (ಸರ್ವನಾಮಗಳು)

ಹಿಂದಿ ಭಾಷೆಯಲ್ಲಿ ಒಟ್ಟು 11 ಸರ್ವನಾಮಗಳಿರುತ್ತವೆ:—
मैं, तू, आप, वह, यह, जो, सो, कौन, कोई, कुछ, क्या.

ಮಾತನಾಡುವಾಗ ಮನುಷ್ಯನು ತನಗಾಗಿ ನಾನು ಇಲ್ಲ ನಾವು ಎಂದೂ, ಯಾರೊಡನೆ ಮಾತನಾಡುವದಿದೆಯೋ ಅವರಿಗಾಗಿ ನೀನು ಇಲ್ಲವೆ ನೀವು ಎಂದೂ ಹಾಗು ಯಾರ ವಿಷಯವಾಗಿ ಇಲ್ಲವೆ ಯಾವುದರ ವಿಷಯವಾಗಿ ಮಾತನಾಡುವದಿದೆಯೋ ಅವರಿಗಾಗಿ

ಇಲ್ಲವೆ ಅದಕ್ಕಾಗಿ, **ಅವನು, ಇವನು, ಯಾವನು, ಯಾವುದು, ಅದು, ಇದು** ಇತ್ಯಾದಿಯಾಗಿ ಶಬ್ದಗಳ ಪ್ರಯೋಗ ಮಾಡುತ್ತಾನೆ. ಈ ಮೂರು ಪ್ರಕಾರದ ವಿಧಾನಕ್ಕಾಗಿ ವ್ಯಾಕರಣದಲ್ಲಿ **ಪುರುಷ**ವೆಂದು ಕರೆಯುತ್ತಾರೆ.

(1) ಮಾತನಾಡುವವನು ತನಗಾಗಿ ಉಪಯೋಗಿಸಿಕೊಳ್ಳುವ ಸರ್ವನಾಮಕ್ಕೆ *ಪ್ರಥಮ **ಪುರುಷ**ವೆನ್ನುತ್ತಾರೆ. ಉದಾ:— **मैं**–ನಾನು, हम–ನಾವು.

(2) ಮಾತನಾಡುವವನು ಯಾರೊಡನೆ ಮಾತನಾಡುವದಿದೆಯೋ ಅವರಿಗಾಗಿ ಉಪಯೋಗಿಸುವ ಸರ್ವನಾಮಕ್ಕೆ **ದ್ವಿತೀಯ ಪುರುಷ**ವೆನ್ನುತ್ತಾರೆ. ಉದಾ:— तू–ನೀನು, तुम–ನೀವು, आप–ತಾವು.

(3) ಮಾತನಾಡುವವನು ಯಾರ ಅಥವಾ ಯಾವುದರ ವಿಷಯವಾಗಿ ಮಾತಾಡುವನೋ ಅವರಿಗಾಗಿ ಇಲ್ಲವೆ ಅದಕ್ಕಾಗಿ ಉಪಯೋಗಿಸುವ ಸರ್ವನಾಮಕ್ಕೆ **ತೃತೀಯ ಪುರುಷ**ವೆನ್ನುತ್ತಾರೆ. ಉದಾ:— वह–ಅವನು, ಅವಳು, ಅದು, ಆ; कौन–ಯಾವನು, ಯಾವಳು, ಯಾವದು ಇತ್ಯಾದಿ.

ಪ್ರಥಮ ಮತ್ತು ದ್ವಿತೀಯ ಪುರುಷದ ಸರ್ವನಾಮಗಳನ್ನು ಬಿಟ್ಟು ಉಳಿದ ಎಲ್ಲ ಸರ್ವನಾಮಗಳು ಹಾಗು ನಾಮಗಳು ತೃತೀಯ ಪುರುಷದಲ್ಲಿ ಬರುತ್ತವೆ. ಉದಾ:— वह, यह, कौन, घर, मेज, धारवाड, पेड ಇತ್ಯಾದಿ.

---

* ಈ ಪುರುಷಗಳ ನಾಮಗಳು ಉತ್ತಮ, ಮಧ್ಯಮ ಹಾಗು ಪ್ರಥಮ-ಪುರುಷಗಳೆಂದೂ ಇವೆ. ಆದರೆ ಅನುಕೂಲತೆಯ ದೃಷ್ಟಿಯಿಂದ ಇಲ್ಲಿ ಕ್ರಮವಾಗಿ ಪ್ರಥಮ, ದ್ವಿತೀಯ ಮತ್ತು ತೃತೀಯ ಪುರುಷಗಳೆಂದು ಬರೆಯಲಾಗಿದೆ.

ಮೇಲಿನ ಎಲ್ಲ 11 ಸರ್ವನಾಮಗಳೂ ಪುರುಷವಾಚಕ ಸರ್ವನಾಮಗಳೆನ್ನಿಸಿಕೊಳ್ಳುತ್ತವೆ. ಇವುಗಳಲ್ಲಿ ಪ್ರಯೋಗದ ದೃಷ್ಟಿಯಿಂದ ಆರು ಪ್ರಕಾರಗಳಿರುತ್ತವೆ.

(1) ಪುರುಷವಾಚಕ:— मैं, तू, आप।

(2) ನಿಜವಾಚಕ:— आप।

(3) ನಿಶ್ಚಯವಾಚಕ:— यह, वह, सो।

(4) ಅನಿಶ್ಚಯವಾಚಕ:— कोई, कुछ।

(5) ಸಂಬಂಧವಾಚಕ:— जो।

(6) ಪ್ರಶ್ನವಾಚಕ:— कौन, क्या।

ಈ ಪಾಠದಲ್ಲಿ ಪುರುಷವಾಚಕ, ನಿಜವಾಚಕ ಮತ್ತು ನಿಶ್ಚಯವಾಚಕ ಸರ್ವನಾಮಗಳನ್ನು ನಡೆಯಿಸಿ ತೋರಿಸಲಾಗಿದೆ.

ಸರ್ವನಾಮಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತಿದಾಗ ಅವು ಕೆಳಗಿನಂತೆ ರೂಪತಾಳುತ್ತವೆ.

| | ಏಕವಚನ | ಬಹುವಚನ |
|---|---|---|
| | **मैं ನಾನು** | **हम ನಾವು** |
| ಪ್ರ. | मैंने ನಾನು | हमने ನಾವು |
| ದ್ವಿ. | मुझको, मुझे ನನ್ನನ್ನು | हमको, हमें ನಮ್ಮನ್ನು |
| ತೃ. | मुझसे ನನ್ನಿಂದ | हमसे ನಮ್ಮಿಂದ |
| ಚ. | मुझको, मुझे ನನಗೆ<br>मेरेलिये, मेरेवास्ते ನನ್ನ ಸಲುವಾಗಿ | हमको, हमें ನಮಗೆ<br>हमारेलिये, हमारेवास्ते ನಮ್ಮ ಸಲುವಾಗಿ |
| ಪಂ. | मुझसे ನನ್ನಿಂದ | हमसे ನಮ್ಮಿಂದ |

ಷ. मेरा, मेरे, मेरी ನನ್ನ  हमारा, हमारे, हमारी ನಮ್ಮ

ಸ. मुझमें ನನ್ನಲ್ಲಿ  हममें ನಮ್ಮಲ್ಲಿ
मुझपर ನನ್ನಮೇಲೆ  हमपर ನಮ್ಮಮೇಲೆ

तू ನೀನು  तुम ನೀವು

ಪ್ರ. तूने ನೀನು  तुमने ನೀವು

ದ್ವಿ. तुझको, तुझे ನಿನ್ನನ್ನು  तुमको, तुम्हें ನಿಮ್ಮನ್ನು

ತೃ. तुझसे ನಿನ್ನಿಂದ  तुमसे ನಿಮ್ಮಿಂದ

ಚ. तुझको, तुझे ನಿನಗೆ  तुमको, तुम्हे ನಿಮಗೆ
तेरेलिये, तेरेवास्ने ನಿನ್ನ ಸಲುವಾಗಿ  तुम्हारेलिये, तुम्हारेवास्ते ನಿಮ್ಮ ಸಲುವಾಗಿ

ಪಂ. तुझसे ನಿನ್ನಿಂದ  तुमसे ನಿಮ್ಮಿಂದ

ಷ. तेरा, तेरे, तेरी ನಿನ್ನ  तुम्हारा, तुम्हारे, तुम्हारी ನಿಮ್ಮ

ಸ. तुझमें ನಿನ್ನಲ್ಲಿ  तुममें ನಿಮ್ಮಲ್ಲಿ
तुझपर ನಿನ್ನಮೇಲೆ  तुमपर ನಿಮ್ಮಮೇಲೆ

ಹಿಂದಿ ಭಾಷೆಯಲ್ಲಿ ಎರಡು आप ಗಳಿರುತ್ತವೆ. (1) ಪುರುಷ ವಾಚಕ (ಆದರ ಸೂಚಕ) (2) ನಿಜವಾಚಕ (ಆತ್ಮಾರ್ಥಕ ಸೂಚಕ). ಪುರುಷವಾಚಕ आप ಯಾವಾಗಲೂ ದ್ವಿತೀಯ ಪುರುಷ ಬಹು-ವಚನದ ಅರ್ಥದಲ್ಲಿ ಆದರ ಪ್ರಕಟಿಸಲು ಬಂದರೆ, ನಿಜವಾಚಕ आप ಯಾವಾಗಲೂ ಏಕವಚನದಲ್ಲಿದ್ದುಕೊಂಡು ನಾಮ ಮತ್ತು ಸರ್ವನಾಮಗಳ ಎರಡೂ ವಚನಗಳಲ್ಲಿ ಬರುತ್ತದೆ. ಪುರುಷವಾಚಕ आप ಆದರ ಸೂಚಕ ಬಹುವಚನವೇ ಇದ್ದುದರಿಂದ ಇದರ ಏಕ-ವಚನದರೂಪವಿಲ್ಲ. ಇದಕ್ಕೆ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಿಬಿಟ್ಟರೆ

ಇದರ ರೂಪಗಳು ಸಿದ್ಧವಾಗುತ್ತವೆ. ನಿಜವಾಚಕ आप ಇದರ ವಿಕೃತರೂಪ अपना ಆಗಿದ್ದು, ಇದು ಷಷ್ಠೀ ವಿಭಕ್ತಿಯಲ್ಲಿ ಬರುತ್ತದೆ. ಇದಕ್ಕೆ ಪ್ರಥಮಾ ವಿಭಕ್ತಿ ಪ್ರತ್ಯಯ ने ಹತ್ತುವದಿಲ್ಲ. ಇದರ ಬಹುವಚನದ ರೂಪಗಳಿರುವದಿಲ್ಲ.

| | ನಿಜವಾಚಕ आप ಇದರ ಏಕವಚನ ರೂಪಗಳು | ಪುರುಷವಾಚಕ आप ಇದರ ಬಹುವಚನ ರೂಪಗಳು |
|---|---|---|
| ಪ್ರ. | आप ತಾನು | आपने ತಾವು |
| ದ್ವಿ. | अपनेको ತನ್ನನ್ನು | आपको ತಮ್ಮನ್ನು |
| ತೃ. | अपनेसे ತನ್ನಿಂದ | आपसे ತಮ್ಮಿಂದ |
| ಚ. | अपनेको ತನಗೆ | आपको ತಮಗೆ |
| | अपनेलिये / अपनेवास्ते ತನ್ನ ಸಲುವಾಗಿ | आपकेलिये / आपकेवास्ते ತಮ್ಮ ಸಲುವಾಗಿ |
| ಪಂ. | अपनेसे ತನ್ನಿಂದ | आपसे ತಮ್ಮಿಂದ |
| ಷ. | अपना, अपने अपनी ತನ್ನ | आपका, आपके, आपकी ತಮ್ಮ |
| ಸ. | अपनेमें ತನ್ನಲ್ಲಿ | आपमें ತಮ್ಮಲ್ಲಿ |
| | अपनेपर ತನ್ನ ಮೇಲೆ | आपपर ತಮ್ಮ ಮೇಲೆ |

| | यह ಇವನು, ಇವಳು, ಇದು, ಈ | ये ಇವರು, ಇವು, ಈ |
|---|---|---|
| ಪ್ರ. | इसने<br>ಇವನು, ಇವಳು, ಇದು, ಈ. | इन्होंने<br>ಇವರು, ಇವು, ಈ. |
| ದ್ವಿ. | इसको, इसे<br>ಇವನನ್ನು, ಇವಳನ್ನು, ಇದನ್ನು. | इनको, इन्हें<br>ಇವರನ್ನು, ಇವನ್ನು. |
| ತೃ. | इससे<br>ಇವನಿಂದ,ಇವಳಿಂದ,ಇದರಿಂದ. | इनसे<br>ಇವರಿಂದ, ಇವುಗಳಿಂದ. |

ಚ. इसको, इसे — इनको, इन्हें
ಇವನಿಗೆ, ಇವಳಿಗೆ, ಇದಕ್ಕೆ. — ಇವರಿಗೆ, ಇವುಗಳಿಗೆ
इसकेलिये / इसकेवास्ते — ಇವನ ಸಲುವಾಗಿ, ಇವಳ ಸಲುವಾಗಿ, ಇದರ ಸಲುವಾಗಿ — इनकेलिये / इनकेवास्ते — ಇವರ ಸಲುವಾಗಿ, ಇವುಗಳ ಸಲುವಾಗಿ

ಪಂ. इससे — इनसे
ಇವನಿಂದ, ಇವಳಿಂದ, ಇದರಿಂದ. — ಇವರಿಂದ, ಇವುಗಳಿಂದ.

ಷ. इसका, इसके, इसकी — इनका, इनके, इनकी
ಇವನ, ಇವಳ, ಇದರ. — ಇವರ, ಇವುಗಳ.

ಸ. इसमें — इनमें
ಇವನಲ್ಲಿ, ಇವಳಲ್ಲಿ, ಇದರಲ್ಲಿ. — ಇವರಲ್ಲಿ, ಇವುಗಳಲ್ಲಿ.
इसपर — इनपर
ಇವನಮೇಲೆ, ಇವಳಮೇಲೆ, ಇದರಮೇಲೆ. — ಇವರಮೇಲೆ, ಇವುಗಳಮೇಲೆ.

**वह ಅವನು, ಅವಳು, ಅದು, ಆ — वे ಅವರು, ಅವು, ಆ**

ಪ್ರ. उसने — उन्होंने
ಅವನು, ಅವಳು, ಅದು, ಆ. — ಅವರು, ಅವು, ಆ.

ದ್ವಿ. उसको, उसे — उनको, उन्हे
ಅವನನ್ನು, ಅವಳನ್ನು, ಅದನ್ನು. — ಅವರನ್ನು, ಅವುಗಳನ್ನು.

ತೃ. उससे — उनसे
ಅವನಿಂದ, ಅವಳಿಂದ, ಅದರಿಂದ. — ಅವರಿಂದ, ಅವುಗಳಿಂದ.

ಚ. उसको, उसे — उनको, उन्हें
ಅವನಿಗೆ. ಅವಳಿಗೆ. — ಅವರಿಗೆ, ಅವುಗಳಿಗೆ.
उसकेलिये / उसकेवास्ते — ಅವನ ಸಲುವಾಗಿ, ಅವಳ ಸಲುವಾಗಿ, ಅದರ ಸಲುವಾಗಿ — उनकेलिये / उनकेवास्ते — ಅವರ ಸಲುವಾಗಿ, ಅವುಗಳಸಲುವಾಗಿ

# पाठ 16

## संबंधसूचक अव्यय (ಸಂಬಂಧಸೂಚಕ ಅವ್ಯಯಗಳು)

ಪುರುಷ, ಲಿಂಗ, ವಚನ, ಕಾರಕ-ಮೊದಲಾದವುಗಳಿಂದ ಬದಲಾಗದೇ ಇದ್ದ ಶಬ್ದಗಳಿಗೆ ಅವಿಕಾರಿಶಬ್ದ ಅಥವಾ ಅವ್ಯಯಗಳೆನ್ನುತ್ತಾರೆ.

ವಾಕ್ಯದಲ್ಲಿ ಯಾವದೇ ಒಂದು ಶಬ್ದದ ಸಂಬಂಧವನ್ನು ಇನ್ನೊಂದು ಶಬ್ದದೊಡನೆ ತೋರಿಸುವ ಅವ್ಯಯಕ್ಕೆ ಸಂಬಂಧಸೂಚಕ ಅವ್ಯಯವೆನ್ನುತ್ತಾರೆ. ಉದಾ:—

(1) घर **के** अंदर कौन हैं ? ಮನೆಯೊಳಗೆ ಯಾರು ಇರುತ್ತಾರೆ ?

(2) आलियाबेगम **के यहाँ** दस नये पैसे हैं। ಆಲಿಯಾಬೇಗಮಳ ಹತ್ತಿರ ಹತ್ತು ನಯೆಪೈಸೆಗಳಿವೆ.

(3) प्रमीला शक्कर **के बिना** दूध नही पीती। ಪ್ರಮೀಲಾ ಸಕ್ಕರೆಯಿಲ್ಲದೆ ಹಾಲು ಕುಡಿಯುವದಿಲ್ಲ.

(4) विनोद अहमदजान **की तरह** तबला बजाता है। ವಿನೋದನು ಅಹಮದಜಾನರಂತೆ ತಬಲಾ ಬಾರಿಸುತ್ತಾನೆ.

(5) किसान खेत **की ओर** जा रहा है। ರೈತನು ಹೊಲದಕಡೆಗೆ ಹೋಗುತ್ತಿದ್ದಾನೆ.

ಮೇಲಿನ ವಾಕ್ಯಗಳಲ್ಲಿ ದಪ್ಪಕ್ಷರಗಳಲ್ಲಿರುವ ಶಬ್ದಗಳು ಸಂಬಂಧಸೂಚಕ ಅವ್ಯಯಗಳಾಗಿರುತ್ತವೆ. ಈ ಅವ್ಯಯಗಳ ಹಿಂದೆ ಸಾಮಾನ್ಯವಾಗಿ ಷಷ್ಠೀ ವಿಭಕ್ತಿ ಪ್ರತ್ಯಯ ಕೆ ಬರುತ್ತದೆ. ಉದಾ:—

| | |
|---|---|
| के बिना ಇಲ್ಲದೆ, ಹೊರತಾಗಿ | पेट्रोल के बिना |
| के सिवा ಇಲ್ಲದೆ, ಹೊರತಾಗಿ | राम के सिवा |
| के अलावा ಅಲ್ಲದೆ | चावल के अलावा |
| के सामने ಎದುರಿನಲ್ಲಿ | मंदिर के सामने |
| के यहाँ ಅಲ್ಲಿ | सीता के यहाँ |
| के बारे में ವಿಷಯವಾಗಿ | गांधीजी के बारे मे |
| के पहले ಮೊದಲು | स्वतंत्रता के पहले |
| के साथ ಸಂಗಡ | पिताजी के साथ |
| के पास ಹತ್ತಿರ | मोहन के पास |
| के पीछे ಹಿಂದೆ | घर के पीछे |
| के बाद ನಂತರ | छुट्टी के बाद |
| के नीचे ಕೆಳಗೆ | पेड के नीचे |
| के बाहर ಹೊರಗೆ | स्कूल के बाहर |
| के अंदर ಒಳಗೆ | मस्जिद के अंदर |
| के ऊपर ಮೇಲೆ | पहाड के ऊपर |
| के बीच ನಡುವೆ | तालाब के बीच |
| के समान ಹಾಗೆ, ಅಂತೆ | बोसजी के समान |
| के आगे ಎದುರಿನಲ್ಲಿ | राधा के आगे |
| के द्वारा ಮುಖಾಂತರ | डाकिये के द्वारा |
| के नज़दीक ಸಮೀಪ | कालेज के नज़दीक |

ಈ ಮುಂದಿನ ಸಂಬಂಧಸೂಚಕ ಅವ್ಯಯಗಳ ಹಿಂದೆ ಷಷ್ಠಿ ವಿಭಕ್ತಿ ಪ್ರತ್ಯಯ की ಬರುತ್ತದೆ.

| | |
|---|---|
| की अपेक्षा ಕ್ಕಿಂತ | सुशीला की अपेक्षा |
| की ओर ಕಡೆಗೆ | शहर की ओर |
| की तरफ ಕಡೆಗೆ | नदी की तरफ |
| की तरह ಹಾಗೆ, ಅಂತೆ | करीमखाँ की तरह |
| की जगह ಸ್ಥಳದಲ್ಲಿ | नेहरूजी की जगह |
| की नाई ಅಂತೆ | चील की नाई |
| की खातिर ಸಲುವಾಗಿ | देश की खातिर |
| की बदौलत ಮುಖಾಂತರ | शहीदों की बदौलत |

ಈ ಎಲ್ಲ ಸಂಬಂಧಸೂಚಕ ಅವ್ಯಯಗಳು ಸರ್ವನಾಮಗಳ ಮುಂದೆ ಬಂದಾಗ ಆ ಸರ್ವನಾಮಗಳ ಷಷ್ಠೀ ವಿಭಕ್ತಿಯ ರೂಪದೊಡನೆ ಸೇರಿಕೊಳ್ಳುತ್ತವೆ. ಉದಾ:— मैं+के यहाँ=मेरे यहाँ; वह+के पास=अुसके पास; वे+के नजदीक=अुनके नजदीक; यह+के आगे=इसके आगे; तुम+की तरह=तुम्हारी तरह; तू+की जगह=तेरी जगह।

## ಅಭ್ಯಸನಗಳು

(अ) ತೆರವಿದ್ದ ಸ್ಥಳದಲ್ಲಿ ಯೋಗ್ಯ ಸಂಬಂಧಸೂಚಕ ಅವ್ಯಯವನ್ನು ಸೇರಿಸಿ ವಾಕ್ಯಗಳನ್ನು ಪೂರ್ಣಗೊಳಿಸಿರಿ.

(1) इमाम साहब——दस घोडे हैं। (2) मैं पिताजी——बाजार जारहा हूँ। (3) गीता पद्मिनी ——नाचती है। (4) वह लडका अुस लडकी—— घूर रहा है। (5) पेड——बंदर बैठा है। (6) स्कूल-

अेक सुंदर बगीचा है। (7) शशिकला बच्चों——रोती है। (8) तुम राजेंद्रप्रसादजी——क्या जानते हो ?

ಕ. ಶ:— घूरना–ದಿಟ್ಟಿಸಿ ನೋಡುವದು.

(ब) ಕಂಸಿನಲ್ಲಿ ಕೊಟ್ಟ ಸರ್ವನಾಮಗಳನ್ನು ಉಪಯೋಗಿಸಿ ವಾಕ್ಯಗಳನ್ನು ಪೂರ್ಣಗೊಳಿಸಿರಿ.

(1) ——के समान दूसरा पहलवान कोई नहीं। (वह) (2) आजकल वह——की जगह मे काम करता है। (मैं) (3) ——के बिना यह काम कोई नही कर सकता; (तुम) (4) ——की अपेक्षा अुसका कुरता अच्छा है। (यह) (5) ——के पीछे मोहन खडा है ? (कौन) (6) ——के अंदर क्या है ? (वह) (7) वे भी ——की तरह मनुष्य हैं। (हम) (8) ——के द्वारा यह खबर पहुँचेगी ? (कौन)।

ಕ. ಶ:— कुरता(ಪು)–ಅಂಗಿ; खबर(ಸ್ತ್ರೀ)–ಸುದ್ದಿ; पहुँचना–ಮುಟ್ಟುವದು.

(क) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಪದ್ಮಾ ಪ್ರವೇಶಿಕಾ ಪಾಸಾದಬಳಿಕ ವಿಶಾರದದ ಅಭ್ಯಾಸ ಮಾಡುತ್ತಿದ್ದಾಳೆ. (2) ಸುಧಾ ನನ್ನ ಕಡೆಗೆ ಏಕೆ ನೋಡುತ್ತಿದ್ದಾಳೆ? (3) ಶಾಂತಾ ಯಾರ ಹಾಗೆ ಹಾಡುತ್ತಾಳೆ? (4) ಮಹೇಶನು ರಾತ್ರಿ ಒಂಭತ್ತು ಘಂಟೆಯ ಮೊದಲು ಮಲಗುತ್ತಾನೆ. (5) ಆ ಮರದ ಕೆಳಗೆ ಇಬ್ಬರು ಹುಡುಗಿಯರು ಆಟವಾಡುತ್ತಿದ್ದಾರೆ. (6) ಭರಮಪ್ಪನು ಕೋಣೆಯ ಒಳಗೆ ಬರೆಯುತ್ತಿದ್ದಾನೆ.

(7) ಭೀಮರಾಯರು ಜಳಕಮಾಡಲು ನದಿಯ ಕಡೆಗೆ ಹೋಗುತ್ತಿದ್ದಾರೆ. (8) ನಾನು ಅಕ್ಕನ ಸಂಗಡ ಸಿನೇಮಾ ನೋಡಲು ಹೋಗುವೆನು. (9) ನಮ್ಮ ಮನೆಯ ಎದುರಿಗೆ ಒಂದು ಬೇವಿನ ಮರವಿದೆ. (10) ಆ ಮಂದಿರದ ಹಿಂದೆ ಒಂದು ಕೆರೆ ಇರುತ್ತದೆ.

---

# पाठ 17

## प्रश्नवाचक शब्द (ಪ್ರಶ್ನಾರ್ಥಕ ಶಬ್ದಗಳು)

क्या—ಏನು, कब—ಯಾವಾಗ, कैसा—ಎಂತಹ, किधर—ಯಾವಕಡೆಗೆ, कौन—ಯಾವನು, ಯಾವಳು, ಯಾವದು, ಯಾರು, कितना—ಎಷ್ಟು, क्यों—ಏಕೆ, कहाँ—ಎಲ್ಲಿ, कैसे—ಹೇಗೆ, कौनसा—ಯಾವ ಮೊದಲಾದವುಗಳು ಪ್ರಶ್ನಾರ್ಥಕಗಳಾಗಿರುತ್ತವೆ. ಇವು ವಾಕ್ಯಗಳಲ್ಲಿ ಪ್ರಯೋಗಿಸಲ್ಪಟ್ಟಾಗ ಆ ವಾಕ್ಯಗಳು ಪ್ರಶ್ನಾರ್ಥಕ ವಾಕ್ಯಗಳಾಗುತ್ತವೆ. ಉದಾ:—

(1) आप **कहाँ** जा रहे हैं? ತಾವು ಎಲ್ಲಿಗೆ ಹೋಗುತ್ತಿದ್ದೀರಿ?

(2) इस घर में **कौन** रहते हैं? ಈ ಮನೆಯಲ್ಲಿ ಯಾರು ಇರುತ್ತಾರೆ?

(3) यहाँ **कितने** केले हैं? ಇಲ್ಲಿ ಎಷ್ಟು ಬಾಳೆಹಣ್ಣುಗಳಿರುತ್ತವೆ?

ಪ್ರಶ್ನಾರ್ಥಕ ಶಬ್ದಗಳಿಲ್ಲದ ವಾಕ್ಯಗಳ ಕ್ರಿಯಾಪದಗಳನ್ನು ವಿಶಿಷ್ಟ ಧ್ವನಿಯಿಂದ ಎಳೆದು ಉಚ್ಚರಿಸುವದರಿಂದ ಅವು ಕೂಡ

ಪ್ರಶ್ನಾರ್ಥಕ ವಾಕ್ಯಗಳಾಗುವವು. ಇಂತಹ ವಾಕ್ಯಗಳನ್ನು ಬರೆಯು-ವಾಗ ವಾಕ್ಯದ ಆರಂಭದಲ್ಲಿ क्या ಇಡಬೇಕು. ಉದಾ:—

(1) क्या तुम जाते हो ? ನೀನು ಹೋಗುತ್ತೀಯಾ ?

(2) क्या वे गाते हैं ? ಅವರು ಹಾಡುತ್ತಾರೆಯೋ ?

ಆದರೆ ಸಂಭಾಷಣೆಯಲ್ಲಿ क्या ಉಪಯೋಗಿಸದೇ ಕ್ರಿಯಾ-ಪದವನ್ನು ಪ್ರಶ್ನಾರ್ಥಕವು ಸೂಚಿತವಾಗುವಂತೆ ಎಳೆದು ಉಚ್ಚರಿಸು-ತ್ತಾರೆ. ಉದಾ:—

(1) मोहन घर जाता है ? ಮೋಹನನು ಮನೆಗೆ ಹೋಗುತ್ತಾನೆಯೋ ?

(2) तुम हिन्दी सीखते हो ? ನೀನು ಹಿಂದಿ ಕಲಿ-ಯುತ್ತೀಯಾ ?

## ಅಭ್ಯಾಸಗಳು

(अ) ತೆರವಿದ್ದ ಸ್ಥಳಗಳಲ್ಲಿ ಯೋಗ್ಯ ಪ್ರಶ್ನಾರ್ಥಕ ಶಬ್ದ-ಗಳನ್ನು ತುಂಬಿರಿ.

(1) आपके पास——रुपये हैं ? (2) वहाँ——जा रहा है ? (3) गोलगुम्बज——है ? (4) तुम——घर में रहते हो ? (5) तुम्हारी बहिन का नाम——है ? (6) वह लडकी——हँसती है ? (7) आप अकेले यह काम———कर सकते हैं ? (8) वे——बेंगलूर जाते हैं ?

(ब) ಕೆಳಗಿನ ಉತ್ತರಗಳಿಗೆ ಯೋಗ್ಯ ಪ್ರಶ್ನೆಗಳನ್ನು ಬರೆಯಿರಿ.

[ಉದಾ:— मैं रोज सबेरे पाँच बजे अुठता हूँ। तुम रोज सबेरे कितने बजे अुठते हो ?]

(1) आजके जलसेमें राजाजी बोलेंगे।
(2) सन् 1947 मे हमारा देश स्वतंत्र हुआ।
(3) अुमेशके पास पच्चीस नये पैसे हैं।
(4) गोपालका भाई हावेरी में रहता है।
(5) यह गाय दो सेर दूध देती है।
(6) श्रीनगर सुंदर शहर है।
(7) हमारे देशकी राष्ट्रभाषा हिन्दी है।
(8) प्रभावती कब बंबई जायेगी।

(क) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಈ ತರಗತಿಯಲ್ಲಿ ಎಷ್ಟು ಹುಡುಗರು ಓದುತ್ತಾರೆ? (2) ತಮ್ಮ ಮಗಳು ಸಹ ಹಿಂದಿ ಕಲಿಯುತ್ತಾಳೆಯೇ? (3) ತಿಲಕರ ವಿಷಯವಾಗಿ ನಿನಗೇನು ಗೊತ್ತಿರುತ್ತದೆ? (4) ನೀವು ನನ್ನ ಮನೆಗೆ ಯಾವಾಗ ಬರುವಿರಿ? (5) ನಿಮಗೆ ಹಿಂದಿ ಯಾರು ಕಲಿಸುತ್ತಾರೆ? (6) ಆ ಹುಡುಗನು ಯಾವ ಕಡೆಗೆ ಹೊರಟಿದ್ದಾನೆ? (7) ಭಗವಂತನು ಎಲ್ಲಿ ಇರುತ್ತಾನೆ? (8) ನಿಮ್ಮ ಅಜ್ಜನ ಆರೋಗ್ಯ ಹೇಗಿದೆ? (9) ಅವಳು ಏಕೆ ಅಳುತ್ತಿದ್ದಾಳೆ? (10) ಈಗ ಯಾವ ದೇಶವು ಪರತಂತ್ರವಿದೆ?

ಕ. ಶ:— ಆರೋಗ್ಯ—तबीयत(ಸ್ತ್ರೀ); ತರಗತಿ—दर्जा(ಪು).

---

# पाठ 18

## क्रियार्थक संज्ञा (ಕೃದಂತ ಭಾವನಾಮ)

ಧಾತುಗಳಿಗೆ ना ಪ್ರತ್ಯಯವನ್ನು ಜೋಡಿಸುವದರಿಂದ ಕೃದಂತ ಭಾವನಾಮುಗಳಾಗುತ್ತವೆ. ಉದಾ:— करना—ಮಾಡುವದು, ಮಾಡುವಿಕೆ; देखना—ನೋಡುವದು, ನೋಡುವಿಕೆ; पढना—ಓದುವದು, ಓದುವಿಕೆ ಇತ್ಯಾದಿ.

ಕೃದಂತ ಭಾವನಾಮುಗಳು ಯಾವಾಗಲೂ ಪುಲ್ಲಿಂಗ ಏಕವಚನ ನಾಮುಗಳಂತೆ ಉಪಯೋಗಿಸಲ್ಪಡುತ್ತವೆ. ಉದಾ:—

(1) बालक का **रोना** तंग कर रहा है। ಬಾಲಕನು ಅಳುವದು ತೊಂದರೆದಾಯಕವಾಗಿದೆ. **ಅಥವಾ** ಬಾಲಕನ ಅಳು ತೊಂದರೆದಾಯಕವಾಗಿದೆ.

(2) सीता का **चलना** अजीब है। ಸೀತೆಯು ನಡೆಯುವದು ವಿಚಿತ್ರವಾಗಿದೆ. **ಅಥವಾ** ಸೀತೆಯ ನಡಿಗೆಯು ವಿಚಿತ್ರವಾಗಿದೆ.

ಕ್ರಿಯಾಭಾವವನ್ನು ಪ್ರಕಟಪಡಿಸಲು ಸಹ ಕೃದಂತ ಭಾವನಾಮುಗಳು ಉಪಯೋಗಿಸಲ್ಪಡುತ್ತವೆ. ಉದಾ:—

(1) सबेरे जल्दी **उठना** अच्छा है। ಬೆಳಿಗ್ಗೆ ತೀವ್ರ ಏಳುವದು ಒಳ್ಳೆಯದು.

(2) मुझे **तैरना** आता है। ನನಗೆಈಸಲು ಬರುತ್ತದೆ.

(3) हिन्दी **सीखना** बहुत आसान है। ಹಿಂದಿ ಕಲಿಯುವದು ಬಹಳೇ ಸುಲಭವಾಗಿರುತ್ತದೆ.

ಕೃದಂತ ಭಾವನಾಮಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತು-ವಾಗ ಅವುಗಳ ಅಂತ್ಯದ ना ವು ने ಆಗುತ್ತದೆ. ಉದಾ:—

(1) वह लडकी देखने में सुंदर है। ಆ ಹುಡುಗಿಯು ನೋಡಲಿಕ್ಕೆ ಸುಂದರವಾಗಿದ್ದಾಳೆ.

(2) रामराव रोज नहाने केलिये सोमेश्वर जाते हैं। ರಾಮರಾಯರು ನಿತ್ಯವೂ ಜಳಕ ಮಾಡಲು ಸೋಮೇಶ್ವರಕ್ಕೆ ಹೋಗುತ್ತಾರೆ.

(3) चाय पीने की आदत अच्छी नहीं है। ಚಹಾ ಕುಡಿಯುವ ಚಟವು ಒಳ್ಳೆಯದಲ್ಲ.

ಕೃದಂತ ಭಾವನಾಮಗಳನ್ನು ದ್ವಿತೀಯ ಪುರುಷದ ಸರ್ವ-ನಾಮ (तू, तुम, आप) ಗಳೊಂದಿಗೆ ವಿಧ್ಯರ್ಥಕದ ಅರ್ಥದಲ್ಲಿ ಉಪಯೋಗಿಸುತ್ತಾರೆ. ಉದಾ:—

(1) तू असके घर मत जाना। ನೀನು ಅವನ ಮನೆಗೆ ಹೋಗಬೇಡ.

(2) आजसे तुम हिन्दी सीखना। ಇಂದಿನಿಂದ ನೀನು ಹಿಂದಿಯನ್ನು ಕಲಿಯಬೇಕು.

(3) आप यह किताब पढना। ತಾವು ಈ ಪುಸ್ತಕ ವನ್ನು ಓದಬೇಕು.

## ಅಭ್ಯಸನಗಳು

(अ) ಕಂಸಿನಲ್ಲಿ ಕೊಟ್ಟ ಧಾತುವಿನ ಕೃದಂತ ಭಾವನಾಮ ರೂಪವನ್ನು ತೆರವಿದ್ದ ಸ್ಥಳದಲ್ಲಿ ತುಂಬಿರಿ.

(1) रवीन्द्र———में होशियार है। (गा) (2) खुली हवा में——अच्छा है। (टहल) (3) रातमें

ಕರ್ತೃ ಪುಲ್ಲಿಂಗ ಏಕವಚನವಿದ್ದಾಗ ಧಾತುವಿಗೆ ता, ಬಹುವಚನವಿದ್ದಾಗ ते ಹಾಗು ಸ್ತ್ರೀಲಿಂಗ ಏಕವಚನ ಮತ್ತು ಬಹುವಚನವಿದ್ದಾಗ ती ಜೋಡಿಸಿ ಅವುಗಳ ಮುಂದೆ हो ಸಹಾಯಕ ಧಾತುವಿನ ಭೂತಕಾಲದ ರೂಪಗಳಾದ था, थे, थी, थीं ಗಳನ್ನು ಕ್ರಮವಾಗಿ ಇಡುವದರಿಂದ ಅಪೂರ್ಣ ಭೂತಕಾಲದ ರೂಪಗಳಾಗುತ್ತವೆ. ಉದಾ:—

(1) मैं काम **करता था।** ನಾನು ಕೆಲಸ ಮಾಡುತ್ತಿದ್ದೆನು.
(2) तुम क्या **देखते थे।** ನೀನು ಏನು ನೋಡುತ್ತಿದ್ದಿ?
(3) रमा **गाती थी।** ರಮಾ ಹಾಡುತ್ತಿದ್ದಳು.
(4) लडकियाँ **खेलती थीं।** ಹುಡುಗಿಯರು ಆಡುತ್ತಿದ್ದರು.
(5) लडके **पढते थे।** ಹುಡುಗರು ಓದುತ್ತಿದ್ದರು.

### ಅಭ್ಯಾಸನಗಳು

(अ) ಕೆಳಗಿನ ವಾಕ್ಯಗಳ ಕ್ರಿಯಾಪದಗಳನ್ನು ಅಪೂರ್ಣ ಭೂತಕಾಲಕ್ಕೆ ಬದಲಾಯಿಸಿರಿ.

(1) शोभा कान्वेंट स्कूल में अंग्रेजी पढती है। (2) शशिधर परसों कहाँ जायेगा? (3) नानी रोटियाँ बना रही है। (4) मैं हवाई-अड्डा देखूँगा। (5) आप क्यों भागते हैं? (6) शांता बार बार किसलिये रूठती है? (7) क्या कभी मनुष्य पक्षीकी तरह उडेगा? (8) वे बेंगलूरसे फूलोंकी मालाऐं लाते हैं। (9) स्त्रियाँ हाथों में कंगन पहनती हैं। (10) बच्चा रोता है।

**ಕ. ಶ:—** हवाई-अड्डा(ಪು)–ವಿಮಾನ ನಿಲ್ದಾಣ; रूठना–ಸಿಟ್ಟಿದುಕೊಳ್ಳುವದು; कंगन(ಪು)–ಕಂಕಣ.

(ब) **ಹಿಂದಿಯಲ್ಲಿ ಭಾಷಾಂತರಿಸಿರಿ:—**

(1) ಅವರು ನಿನಗೆ ಏನು ಕೇಳುತ್ತಿದ್ದರು? (2) ಬಾಲ್ಯದಲ್ಲಿ ನಾನು ಬಹಳ ಅಳುತ್ತಿದ್ದೆನು. (3) ಪ್ರಾಚೀನ ಮಾನವರು ಗುಹೆಗಳಲ್ಲಿ ಇರುತ್ತಿದ್ದರು. (4) ಸಾವಿತ್ರಿಯು ಕಾಶಿಯಲ್ಲಿ ಯಾವ ಓಣಿಯಲ್ಲಿ ಇರುತ್ತಿದ್ದಳು? (5) ನಿಜಲಿಂಗಪ್ಪನವರು ಕರ್ನಾಟಕದ ಮುಖ್ಯ ಮಂತ್ರಿಗಳಾಗಿದ್ದರು. (6) ತಾನಸೇನನು ಚಿಕ್ಕಂದಿನಲ್ಲಿ ಹುಲಿಯಂತೆ ಗರ್ಜಿಸುತ್ತಿದ್ದನು. (7) ಈ ಮನೆಯಲ್ಲಿ ಯಾರು ವಾಸಿಸುತ್ತಿದ್ದರು? (8) ಪರೀಕ್ಷೆಯ ದಿನಗಳಲ್ಲಿ ಅವಳು ದಿನಾಲು ಹತ್ತು ತಾಸು ಅಭ್ಯಾಸಮಾಡುತ್ತಿದ್ದಳು. (9) ಭಿಕ್ಷುಕರು ಅನ್ನಬೇಡುತ್ತಿದ್ದರು. (10) ಗಾಂಧೀಜಿಯವರು ಜನರಿಗೆ ಉಪದೇಶಮಾಡುತ್ತಿದ್ದರು.

**ಕ. ಶ:—** ಬಾಲ್ಯ–बचपन (ಪು); ಗುಹೆ–गुहा (ಸ್ತ್ರೀ), ಓಣಿ–गली(ಸ್ತ್ರೀ); ಹುಲಿ–बाघ(ಪು); ಗರ್ಜಿಸುವದು–गरजना; ಉಪದೇಶ–नसीहत(ಸ್ತ್ರೀ); ತಾಸು–घंटा(ಪು) ।

---

# पाठ 20

## तात्कालिक भूतकाल (ತಾತ್ಕಾಲಿಕ ಭೂತಕಾಲ)

ಕರ್ತೃ ಪುಲ್ಲಿಂಗ ಏಕವಚನವಿದ್ದಾಗ ಧಾತುವಿನ ಮುಂದೆ **रहा**, ಬಹುವಚನವಿದ್ದಾಗ **रहे**, ಸ್ತ್ರೀಲಿಂಗ ಏಕವಚನ ಮತ್ತು

ಬಹುವಚನವಿದ್ದಾಗ रही ಇಟ್ಟು ಅವುಗಳ ಮುಂದೆ हो ಸಹಾಯಕ ಧಾತುವಿನ ಭೂತಕಾಲದ ರೂಪಗಳಾದ था, थे, थी, थी ಗಳನ್ನು ಇಡುವದರಿಂದ ತಾತ್ಕಾಲಿಕ ಭೂತಕಾಲದ ರೂಪಗಳಾಗುತ್ತವೆ. ಉದಾ:—

(1) लडका **खेल रहा था।** ಹುಡುಗನು ಆಡುತ್ತಿದ್ದನು.
(2) गधे **रेंक रहे थे।** ಕತ್ತೆಗಳು ಒದರುತ್ತಿದ್ದವು.
(3) गायें **चर रहीं थीं।** ಆಕಳುಗಳು ಮೇಯುತ್ತಿದ್ದವು.
(4) लडकी **सी रही थी।** ಹುಡುಗಿಯು ಹೊಲಿಯುತ್ತಿದ್ದಳು.
(5) वह **हँस रहा था।** ಅವನು ನಗುತ್ತಿದ್ದನು.
(6) आप **क्या कर रहीं थीं?** ತಾವು(ಸ್ತ್ರೀ) ಏನು ಮಾಡುತ್ತಿದ್ದಿರಿ?

ಅಪೂರ್ಣ ಭೂತಕಾಲ ಮತ್ತು ತಾತ್ಕಾಲಿಕ ಭೂತಕಾಲಗಳ ಕ್ರಿಯಾಪದಗಳ ಅರ್ಥಗಳಲ್ಲಿ ಹಿಂದಿಯಲ್ಲೇ ಆಗಲಿ, ಕನ್ನಡಲ್ಲೇ ಆಗಲಿ ವಿಶೇಷ ವ್ಯತ್ಯಾಸ ಕಂಡುಬರುವದಿಲ್ಲ. ಉದಾ:—

मैं खाता था } ನಾನು ಉಣ್ಣುತ್ತಿದ್ದೆನು ಅಥವಾ ನಾನು
मैं खा रहा था } ಉಣ್ಣುತ್ತಾ ಇದ್ದೆನು.

## ಅಭ್ಯಸನಗಳು

(अ) ಕೆಳಗಿನ ವಾಕ್ಯಗಳ ಕ್ರಿಯಾಪದಗಳನ್ನು ತಾತ್ಕಾಲಿಕ ಭೂತಕಾಲಕ್ಕೆ ಬದಲಾಯಿಸಿರಿ.

(1) मेरी दादी दूध दुहती है। (2) दुष्यंत की दीदी कल गाँव जायेगी। (3) हमारे वर्गमें पच्चीस लडकियाँ पढती हैं। (4) मछली पानी में तैरती थी।

(5) लकडहारा जंगल में लकडियाँ काटेगा। (6) किसान बीज बो रहा है। (7) वह दानी ग़रीबोंको अन्न बाँट रहा है। (8) वह लंगडा कैसे चलता था? (9) डाक्टर साहब रोगीको दवा देते थे। (10) परशुराम परीक्षा में बैठेगा।

**ಕ. ಶ:**— दीदी–ಅಕ್ಕ; बोना–ಬಿತ್ತುವದು; लंगडा–ಕುಂಟ; दुहना–ಹಾಲು ಹಿಂಡುವದು; दवा(ಸ್ತ್ರೀ)–ಔಷಧ.

**(ब) ಹಿಂದಿಯಲ್ಲಿ ಭಾಷಾಂತರಿಸಿರಿ:—**

(1) ಸ್ಟೇಶನ್ನದಲ್ಲಿ ಅವರು ಗಾಡಿಯ ಹಾದಿ ನೋಡುತ್ತಿದ್ದರು. (2) ನಾಯಿಗಳು ಹಿತ್ತಲದಲ್ಲಿ ಬೊಗಳುತ್ತಿದ್ದವು. (3) ವಿಮಾನಗಳು ಆಕಾಶದಲ್ಲಿ ಹಾರಾಡುತ್ತಿದ್ದವು. (4) ಹುಡುಗರು ಪಾಠಗಳನ್ನು ಓದುತ್ತಿದ್ದರು. (5) ಅವರಿಗೆ ತಗಣಿಗಳು ಕಡಿಯಹತ್ತಿದ್ದವು. (6) ಈ ಭಿಕ್ಷುಕನು ನಿನ್ನೆ ಅನ್ನವನ್ನು ಬೇಡುತ್ತಿದ್ದನು. (7) ಗುರುಗಳು ಹಿಂದಿಯನ್ನು ಕಲಿಸುತ್ತಿದ್ದರು. (8) ಆ ಹುಚ್ಚಿಯು ಜನರಿಗೆ ಬೈಯುತ್ತಿದ್ದಳು. (9) ಗಾಡಿಯವನು ಎತ್ತುಗಳಿಗೆ ನೀರು ಕುಡಿಸುತ್ತಿದ್ದನು. (10) ಸಭೆಯ ಜನರು ಚಪ್ಪಾಳೆ ಹೊಡೆಯುತ್ತಿದ್ದರು.

**ಕ. ಶ:**— ಹಾದಿನೋಡುವದು — इंतजार करना; ಹಿತ್ತಲ–पिछवाडा (ಪು); ಹುಚ್ಚಿ–पगली; ಬೈಯುವದು–ग़ालियाँ देना; ಗಾಡಿಯವನು–गाडीवान; ಚಪ್ಪಾಳೆಹೊಡೆಯುವದು–ताली बजाना; ಕುಡಿಸುವದು–पिलाना।

---

# पाठ 21

## सामान्य भूतकाल (अकर्मक)
## [ಸಾಮಾನ್ಯ ಭೂತಕಾಲ (ಅಕರ್ಮಕ)]

ಭೂತಕಾಲದಲ್ಲಿ ಕ್ರಿಯಾಪದದ ಕಾರ್ಯವು ಯಾವಾಗ ಮುಗಿಯಿತೆಂಬುದು ನಿಶ್ಚಿತವಾಗಿ ಸೂಚಿತವಾಗದಿದ್ದುದಕ್ಕೆ **ಸಾಮಾನ್ಯ ಭೂತಕಾಲವೆನ್ನುತ್ತಾರೆ.**

ಧಾತುಗಳಲ್ಲಿ ಅಕರ್ಮಕ ಹಾಗು ಸಕರ್ಮಕಗಳೆಂಬ ಎರಡು ಪ್ರಕಾರಗಳುಂಟು. ಧಾತುವಿಗೆ **ಏನನ್ನು** ಅಥವಾ **ಯಾರನ್ನು** ಎಂದು ಪ್ರಶ್ನಿಸುವದರಿಂದ ಉತ್ತರವು ಸಿಗುವಂತಿದ್ದರೆ ಅದು ಸಾಮಾನ್ಯ-ವಾಗಿ ಸಕರ್ಮಕ ಧಾತು ಎನ್ನಿಸಿಕೊಳ್ಳುವದು ಆದರೆ ಉತ್ತರವು ಸಿಗದಿದ್ದರೆ ಅಕರ್ಮಕ ಧಾತು ಎನ್ನಿಸಿಕೊಳ್ಳುವದು. ಉದಾ:— खा, पी, दे, लिख, पढ, सुन ಮೊದಲಾದ ಧಾತುಗಳು ಸಕರ್ಮಕಗಳಾಗಿವೆ. उठ, बैठ, चल, सो, भाग, घूम ಮೊದಲಾದ ಧಾತುಗಳು ಅಕರ್ಮಕಗಳಾಗಿವೆ.

ಅಕರ್ಮಕ ಹಾಗು ಸಕರ್ಮಕ ಧಾತುಗಳ ಸಾಮಾನ್ಯ ಭೂತಕಾಲದ ರೂಪಗಳು ಈ ಕೆಳಗಿನ ನಿಯಮಗಳಿಗನುಸರಿಸಿ ಆಗುತ್ತವೆ.

अ ಕಾರಾಂತ ಧಾತುಗಳ ಅಂತ್ಯ अ ದ ಸ್ಥಾನದಲ್ಲಿ ಪುಲ್ಲಿಂಗ ಏಕವಚನದಲ್ಲಿ आ, ಬಹುವಚನದಲ್ಲಿ ए, ಸ್ತ್ರೀಲಿಂಗ ಏಕವಚನದಲ್ಲಿ ई ಬಹುವಚನದಲ್ಲಿ ईं ಹಚ್ಚುವದರಿಂದ ಸಾಮಾನ್ಯ ಭೂತಕಾಲದ ರೂಪಗಳಾಗುತ್ತವೆ.

ಉದಾ:—

| | ಪುಲ್ಲಿಂಗ | | ಸ್ತ್ರೀಲಿಂಗ | |
|---|---|---|---|---|
| ಧಾತು | ಏಕವಚನ | ಬಹುವಚನ | ಏಕವಚನ | ಬಹುವಚನ |
| उठ | उठा | उठे | उठी | उठीं। |
| बैठ | बैठा | बैठे | बैठी | बैठीं। |
| चल | चला | चले | चली | चलीं। |
| पढ | पढा | पढे | पढी | पढीं। |
| देख | देखा | देखे | देखी | देखीं। |

ಅ ಕಾರಾಂತ ಧಾತುಗಳನ್ನುಳಿದು ಮಿಕ್ಕೆಲ್ಲ ಧಾತುಗಳಿಗೆ ಪುಲ್ಲಿಂಗ ಏಕವಚನದಲ್ಲಿ या, ಬಹುವಚನದಲ್ಲಿ ये, ಹಾಗು ಸ್ತ್ರೀಲಿಂಗ ಏಕವಚನದಲ್ಲಿ यी, ಬಹುವಚನದಲ್ಲಿ यीं ಹಚ್ಚುವದರಿಂದ ಸಾಮಾನ್ಯ ಭೂತಕಾಲದ ರೂಪಗಳಾಗುತ್ತವೆ. ಉದಾ:—

| | ಪುಲ್ಲಿಂಗ | | ಸ್ತ್ರೀಲಿಂಗ | |
|---|---|---|---|---|
| ಧಾತು | ಏಕವಚನ | ಬಹುವಚನ | ಏಕವಚನ | ಬಹುವಚನ |
| आ | आया | आये | आयी | आयीं। |
| खो | खोया | खोये | खोयी | खोयीं। |
| रो | रोया | रोये | रोयी | रोयीं। |
| बिछा | बिछाया | बिछाये | बिछायी | बिछायीं। |

ಮೇಲಿನ ನಿಯಮಗಳಿಗನುಸರಿಸಿ ನಡೆಯದೇ ವಿಶಿಷ್ಟ ರೀತಿಯಿಂದ ನಡೆಯುವಂತಹ ಕೆಲವು ಅಪವಾದ ಧಾತುಗಳ ಸಾಮಾನ್ಯ ಭೂತಕಾಲದ ರೂಪಗಳನ್ನು ಮುಂದೆ ಕೊಡಲಾಗಿದೆ.

| | ಪುಲ್ಲಿಂಗ | | ಸ್ತ್ರೀಲಿಂಗ | |
|---|---|---|---|---|
| ಧಾತು | ಏಕವಚನ | ಬಹುವಚನ | ಏಕವಚನ | ಬಹುವಚನ |
| दे | दिया | दिये | दी | दीं। |
| ले | लिया | लिये | ली | लीं। |
| पी | पिया | पिये | पी | पीं। |
| कर | किया | किये | की | कीं। |
| जी | जिया | जिये | जी | जीं। |
| सी | सिया | सिये | सी | सीं। |
| जा | गया | गये | गयी | गयी। |
| हो | हुआ | हुए | हुई | हुईं। |

ಅಕರ್ಮಕ ಸಾಮಾನ್ಯ ಭೂತಕಾಲದ ಕ್ರಿಯಾಪದಗಳು ಕರ್ತೃವಿನ ಲಿಂಗ, ವಚನಕ್ಕನುಸಾರವಾಗಿ ನಡೆಯುತ್ತವೆ. (ಈ ಪಾಠದಲ್ಲಿ ಇನ್ನು ಮುಂದೆ ಅಕರ್ಮಕ ಧಾತುಗಳನ್ನೇ ಉಪಯೋಗಿಸಲಾಗಿದೆ.) ಉದಾ:—

(1) वह खेत गया। ಅವನು ಹೊಲಕ್ಕೆ ಹೋದನು.

(2) वे सोकर उठीं। ಅವರು (ಸ್ತ್ರೀ) ಮಲಗಿ ಎದ್ದರು.

(3) मुरारि स्कूल चला। ಮುರಾರಿಯು ಶಾಲೆಗೆ ಹೊರಟನು.

(4) वत्सला पढने बैठी। ವತ್ಸಲಾ ಓದಲು ಕುಳಿತಳು.

(5) सीता और सावित्री घूमने निकलीं।
ಸೀತಾ ಮತ್ತು ಸಾವಿತ್ರಿಯರು ಅಡ್ಡಾಡಲು ಹೊರಟರು.

## ಅಭ್ಯಸನೆಗಳು

(अ) ಕಂಸಿನಲ್ಲಿ ಕೊಟ್ಟ ಧಾತುವಿನ ಸಾಮಾನ್ಯ ಭೂತಕಾಲದ ಯೋಗ್ಯ ರೂಪವನ್ನು ತೆರವಿದ್ದ ಸ್ಥಳದಲ್ಲಿ ತುಂಬಿರಿ.

(1) मैं कल जलसे में नहीं——। (बोल) (2) वह हवाईजहाज देखने——। (जा) (3) श्यामसुंदर की टोपी हवा में——। (उड) (4) मेरी बेटियाँ अभी अभी——। (सो) (5) स्टेशनसे गाडी——। (निकल) (6) आप कल्लापुरसे कब——। (आ) (7) मकडी के जाले में मक्खी——। (फँस) (8) हवा के जोरसे दिया——। (बुझ) (9) जंगल में शेरको देखकर हम डरसे——। (भाग) (10) पेडके पत्ते——। (हिल)।

ಕ. ಶ:— मकडी(ಸ್ತ್ರೀ)–ಜೇಡಹುಳ; मक्खी(ಸ್ತ್ರೀ)–ನೊಣ; फँसना–ಸಿಕ್ಕುಬೀಳುವದು; जाला(ಪು)–ಬಲೆ; हिलना–ಅಲ್ಲಾಡುವದು; डाल(ಸ್ತ್ರೀ)–ಟೊಂಗೆ.

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಮರದ ಟೊಂಗೆಯಮೇಲೆ ಇಣಚಿಯು ಕುಳಿತಿತು. (2) ನೀವು ಯಾವಾಗ ಎದ್ದಿರಿ? (3) ಅವರು ನಿನ್ನೆ ರಾತ್ರಿ ಹತ್ತು ಘಂಟೆಗೆ ಮಲಗಿದರು. (4) ನೀವು ಅಲ್ಲಿ ಎಷ್ಟು ದಿನ ಇದ್ದಿರಿ? (5) ತಾವು ನನ್ನ ಮನೆಗೆ ಏಕೆ ಬರಲಿಲ್ಲ? (6) ಆ ಬೆಕ್ಕು ಯಾವ ಕಡೆಗೆ ಓಡಿತು? (7) ರಾಮ-ಲಕ್ಷ್ಮಣರು ವನವಾಸಕ್ಕೆ ಹೋದರು. (8) ತೇನಸಿಂಗನು ಗೌರೀಶಂಕರ ಶಿಖರವನ್ನು ಏರಿದನು.

(9) ನಿನ್ನೆಯ ಸಭೆಯಲ್ಲಿ ಪಂತರು ಮಾತನಾಡಿದರು. (10) ಮರ-ದಿಂದ ಹಣ್ಣು ಬಿತ್ತು.

**ಕ. ಶ:—** ಇಣಚಿ–गिलहरी(ಸ್ತ್ರೀ); ಏರುವದು–चढना; ಬೀಳುವದು–गिरना.

---

# पाठ 22

## सामान्य भूतकाल (सकर्मक)
## [ಸಾಮಾನ್ಯ ಭೂತಕಾಲ (ಸಕರ್ಮಕ)]

ಸಕರ್ಮಕ ಸಾಮಾನ್ಯ ಭೂತಕಾಲದ ರೂಪಗಳು ಹೇಗೆ ಸಿದ್ಧಗೊಳ್ಳುತ್ತವೆಂಬುದನ್ನು ಹಿಂದಿನ ಪಾಠದಲ್ಲಿ ತಿಳಿಸಲಾಗಿದೆ. ಆದರೆ ಇದರ ಕ್ರಿಯಾಪದಗಳು ಕರ್ತೃವಿನ ಲಿಂಗ ವಚನಕ್ಕನುಸಾರ-ವಾಗಿ ನಡೆಯದೆ, ಕರ್ಮದ ಲಿಂಗ ವಚನಕ್ಕನುಸಾರವಾಗಿ ನಡೆಯು-ತ್ತವೆ; ಹಾಗು ಕರ್ತೃಪದಕ್ಕೆ ने ಪ್ರತ್ಯಯ ಹತ್ತುತ್ತದೆ.

### ने ನಿಯಮ

(1) ಸಾಮಾನ್ಯ ಭೂತಕಾಲದಲ್ಲಿ ಧಾತುವು ಸಕರ್ಮಕ-ವಾಗಿದ್ದರೆ ಕರ್ತೃವಿಗೆ ने ಪ್ರತ್ಯಯವು ಹತ್ತುತ್ತದೆ. ಆಗ ಕ್ರಿಯಾ-ಪದವು ಕರ್ತೃವಿನ ಲಿಂಗ ವಚನಕ್ಕನುಸರಿಸಿ ನಡೆಯದೇ ಕರ್ಮದ ಲಿಂಗ ವಚನಕ್ಕನುಸರಿಸಿ ನಡೆಯುತ್ತದೆ. ಉದಾ:—

(1) गोपालने रोटी खायी ।
ಗೋಪಾಲನು ರೊಟ್ಟಿಯನ್ನು ತಿಂದನು.

(2) गोपालने रोटियाँ खायी ।
ಗೋಪಾಲನು ರೊಟ್ಟಿಗಳನ್ನು ತಿಂದನು.

(3) गोपालने केला खाया।
ಗೋಪಾಲನು ಬಾಳೆಹಣ್ಣನ್ನು ತಿಂದನು.

(4) गोपालने केले खाये।
ಗೋಪಾಲನು ಬಾಳೆಹಣ್ಣುಗಳನ್ನು ತಿಂದನು.

ಮೇಲಿನ ವಾಕ್ಯಗಳಲ್ಲಿ ಕರ್ತೃಪದ ಒಂದೇ ಇದ್ದರೂ ಸಹ ಕ್ರಿಯಾಪದ ಮಾತ್ರ ಕರ್ಮದ ಲಿಂಗ, ವಚನಕ್ಕನುಸರಿಸಿ ಬದಲಾದುದನ್ನು ಗಮನಿಸಬೇಕು.

(2) ಕರ್ಮಪದ ಗುಪ್ತವಿದ್ದರೆ ಕ್ರಿಯಾಪದವು ಯಾವಾಗಲೂ ಪುಲ್ಲಿಂಗ ಏಕವಚನದಂತೆ ನಡೆಯುತ್ತದೆ. ಉದಾ:—

(1) मैंने खाया। — ನಾನು ಉಂಡೆನು.
(2) हमने सुना। — ನಾವು ಕೇಳಿದೆವು.
(3) लडकियोंने पढा। — ಹುಡುಗಿಯರು ಓದಿದರು.
(4) लडकोंने पढा। — ಹುಡುಗರು ಓದಿದರು.

(3) ಕರ್ಮಪದಕ್ಕೆ को ವಿಭಕ್ತಿ ಪ್ರತ್ಯಯ ಹತ್ತಿದಾಗಲೂ ಕ್ರಿಯಾಪದವು ಪುಲ್ಲಿಂಗ ಏಕವಚನದಂತೆ ನಡೆಯುತ್ತದೆ. ಇದನ್ನು ಈ ಕೆಳಗಿನ ಜೋಡಿ ಉದಾಹರಣೆಗಳಿಂದ ತಿಳಿದುಕೊಳ್ಳಬಹದು.

(1) जुम्मनने चार बकरियाँ खरीदीं।
जुम्मनने चार बकरियोंको खरीदा।
} ಜುಮ್ಮನನು ನಾಲ್ಕು ಆಡುಗಳನ್ನು ಕೊಂಡನು.

(2) लीलाने साडी पहनी।
लीलाने साडीको पहना।
} ಲೀಲೆಯು ಸೀರೆಯನ್ನು ಉಟ್ಟಳು.

ला—ತರು, बोल—ಮಾತನಾಡು, भूल—ಮರೆ ಇವು ಹಿಂದಿಯಲ್ಲಿ ಅಕರ್ಮಕ ಧಾತುಗಳಂತೆ ಪ್ರಯೋಗಿಸಲ್ಪಡುತ್ತವೆ. ಆದ್ದರಿಂದ ने ಪ್ರತ್ಯಯವು ಬರುವದಿಲ್ಲ. ಉದಾ:—

(1) मैं आम लाया ।
ನಾನು ಮಾವಿನ ಹಣ್ಣುಗಳನ್ನು ತಂದೆನು.

(2) तुम सभा में क्या बोले ?
ನೀವು ಸಭೆಯಲ್ಲಿ ಏನು ಮಾತನಾಡಿದಿರಿ ?

(3) छाया वह गीत भूली ।
ಛಾಯಾ ಆ ಹಾಡನ್ನು ಮರೆತಳು.

## ಅಭ್ಯಸನಗಳು

(अ) ಕೆಳಗಿನ ವಾಕ್ಯಗಳ ಕ್ರಿಯಾಪದಗಳನ್ನು ಸಾಮಾನ್ಯ ಭೂತಕಾಲಕ್ಕೆ ಬದಲಾಯಿಸಿರಿ.

(1) रामू जंगल मे लकडियाँ काटता है। (2) मैं मोती खरीद रहा हूँ। (3) सुशीला मेरी बात नहीं सुनेगी। (4) वह तुम्हारेलिये नागपुरसे नारगियाँ लायेगा। (5) हम तुम्हें धारवाडके अँगूर देंगे। (6)क्या तुम शरबत पिओगे ? (7) आलियाबेगम कहाँ देखती है ? (8) वे सब वहाँ जाकर क्या बोलेंगे ? (9) तुम मेरी बातें भूलती हो। (10) यह कड़ुआ फल कौन खाता है ?

ಕ. ಶ:— कड़ुआ–ಕಹಿ; नारंगी(ಸ್ತ್ರೀ)–ಕಿತ್ತಳೆಹಣ್ಣು.

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಭೋಗಾಲಾಲರು ರಾಷ್ಟ್ರೀಯ ಹಿಂದಿ ವಿದ್ಯಾಭವನಕ್ಕೆ ಹತ್ತು ಪುಸ್ತಕಗಳನ್ನು ಕೊಟ್ಟರು. (2) ನೀವು ಈ ಆಕಳವನ್ನು ಎಷ್ಟು ರೂಪಾಯಿಗಳಿಗೆ ಕೊಂಡಿರಿ ? (3) ತಾವು ಇಂದು ಬೆಳಗ್ಗೆ

ಕಾಫಿಯನ್ನು ಕುಡಿದಿರಿ? (4) ಅವನು ವೃಂದಾವನವನ್ನು ನೋಡಿ-ದನೇ? (5) ನಿನ್ನ ಟೊಪ್ಪಿಗೆಯನ್ನು ಯಾವ ಸಿಂಪಿಗನು ಹೊಲಿ-ದನು? (6) ಗೌರಮ್ಮನವರು ರೊಟ್ಟಿಗಳನ್ನು ಮಾಡಿದರು. (7) ಆ ತುಂಟ ಹುಡುಗನು ಪುಸ್ತಕವನ್ನು ಹರಿದನು. (8) ನಾನು ಕಥೆಯನ್ನು ಕೇಳಿದೆನು. (9) ಆ ಗವಾಯಿಗಳು ಇಡಿ ರಾತ್ರಿ ಹಾಡಿದರು. (10) ಕಲ್ಲಿನಾಥರ ಮಗ ಚಂದ್ರಕಾಂತನು ಮಿಠಾಯಿ ಬೇಡಿದನು.

**ಕ. ಶ:—** ಸಿಂಪಿಗ—दर्जी; ತುಂಟ—नटखट; ಗವಾಯಿ—गवैया; ಬೇಡುವದು—माँगना ।

---

# पाठ 23

## आसन्न भूतकाल (ಆಸನ್ನ ಭೂತಕಾಲ)

ಭೂತಕಾಲದಲ್ಲಿ ಕ್ರಿಯಾಪದದ ಕಾರ್ಯವು ಅತಿ ಸಮೀಪ-ದಲ್ಲಿ ಮುಗಿಯಿತೆಂಬುದು ಸೂಚಿತವಾಗುವದಕ್ಕೆ **ಆಸನ್ನ ಭೂತಕಾಲ**ವೆನ್ನುತ್ತಾರೆ.

ಸಾಮಾನ್ಯ ಭೂತಕಾಲದ ರೂಪಗಳ ಮುಂದೆ **हो** ಸಹಾಯಕ ಧಾತುವಿನ ವರ್ತಮಾನಕಾಲದ ರೂಪಗಳಾದ है, हैं, हूँ, हो ಗಳನ್ನು, ಕ್ರಿಯಾಪದವು ಅಕರ್ಮಕವಿದ್ದರೆ ಕರ್ತೃವಿಗನುಸಾರವಾಗಿಯೂ, ಸಕರ್ಮಕವಿದ್ದರೆ ಕರ್ಮಕ್ಕನುಸಾರವಾಗಿಯೂ ಇಡುವದರಿಂದ ಆಸನ್ನ ಭೂತಕಾಲದ ರೂಪಗಳಾಗುತ್ತವೆ.

ಆಸನ್ನ ಭೂತಕಾಲದ ಕ್ರಿಯಾಪದವು ಸಕರ್ಮಕವಿದ್ದರೆ

ಕರ್ತೃವಿಗೆ ನೆ ಪ್ರತ್ಯಯವು ಹತ್ತುತ್ತದೆ. ಆಗ ಕ್ರಿಯಾಪದವು ನೆ ನಿಯಮಕ್ಕನುಸಾರವಾಗಿ ನಡೆಯುತ್ತದೆ. ಉದಾ:—

(1) वह धारवाड गया है।
ಅವನು ಧಾರವಾಡಕ್ಕೆ ಹೋಗಿದ್ದಾನೆ.

(2) इमामसाहब अुठे हैं। ಇಮಾಮಸಾಹೇಬರು ಎದ್ದಿದ್ದಾರೆ.

(3) मैंने पत्र लिखा है। ನಾನು ಪತ್ರ ಬರೆದಿದ್ದೇನೆ.

(4) अुन्होंने वह इमारत देखी है।
ಅವರು ಆ ಕಟ್ಟಡವನ್ನು ನೋಡಿದ್ದಾರೆ.

(5) चपा सोयी है। ಚಂಪಾ ಮಲಗಿದ್ದಾಳೆ.

ಸಾಮಾನ್ಯ ಭೂತಕಾಲದ ಸ್ತ್ರೀಲಿಂಗ ಬಹುವಚನದ ಕ್ರಿಯಾಪದಗಳನ್ನು ಆಸನ್ನ ಭೂತಕಾಲಕ್ಕೆ ಪರಿವರ್ತಿಸುವಾಗ ಅವುಗಳ ಅಂತ್ಯಾಕ್ಷರದ ಮೇಲಿನ ಅನುಸ್ವಾರವು ಲೋಪವಾಗುತ್ತದೆ.

ಉದಾ:—

| | ಸಾಮಾನ್ಯ ಭೂತಕಾಲ | ಆಸನ್ನ ಭೂತಕಾಲ |
|---|---|---|
| (1) | वे यहाँ आयीं। | वे यहाँ आयी हैं। |
| (2) | मोहनने रोटियाँ खायीं। | मोहनने रोटियाँ खायी हैं। |

### ಅಭ್ಯಸನಗಳು

(अ) ಕೆಳಗಿನ ವಾಕ್ಯಗಳ ಕ್ರಿಯಾಪದಗಳನ್ನು ಆಸನ್ನ ಭೂತಕಾಲಕ್ಕೆ ಬದಲಾಯಿಸಿರಿ.

(1) कुत्ता रोटी सूँघ रहा है। (2) बिल्ली दूध पीती है। (3) वे किताबें लिखते हैं। (4) लडकियाँ अखबार पढ रही हैं। (5) तोता फल खायेगा।

(6) मैं अपने कपडे खुद धोऊँगा। (7) वे सिर्फ चाय पीते हैं। (8) यह काम कौन करता है? (9) माली पौधोंकी रक्षा करेगा। (10) वह श्रीनगरसे कालीन लाती है।

**ಕ. ಶ:—** तोता (ಪು)–ಗಿಳಿ; रक्षा (ಸ್ತ್ರೀ)–ರಕ್ಷಣೆ; कालीन (ಪು)–ರತ್ನಗಂಬಳಿ.

**(ब) ಹಿಂದಿಯಲ್ಲಿ ಭಾಷಾಂತರಿಸಿರಿ:—**

(1) ಕುವೆಂಪುರವರು ರಾಮಾಯಣವನ್ನು ಬರೆದಿದ್ದಾರೆ. (2) ಈ ಮೇಜಿನಮೇಲೆ ಪುಸ್ತಕವನ್ನು ಯಾರು ಇಟ್ಟಿದ್ದಾರೆ? (3) ಅವರು ನಿಮಗೆ ಏನು ಹೇಳಿದ್ದಾರೆ? (4) ನೀನು ಎಷ್ಟು ಜನರಿಗೆ ಹಿಂದಿಯನ್ನು ಕಲಿಸಿರುವಿ? (5) ನಾನು ನಿಮ್ಮನ್ನು ಮರೆತಿರುವದಿಲ್ಲ. (6) ಜವಾಹರಲಾಲರು ಲಂಡನ್ನಿಗೆ ಹೋಗಿ-ದ್ದಾರೆ. (7) ಅವಳನ್ನು ನೋಡಲು ಯಾರು ಬಂದಿದ್ದಾರೆ? (8) ನಾವು ನಾಟಕವನ್ನು ನೋಡಿದ್ದೇವೆ. (9) ನಾವು ನಮ್ಮ ಹಳ್ಳಿಯನ್ನು ಸ್ವಚ್ಛ ಇಟ್ಟಿದ್ದೇವೆ. (10) ಆ ಭಿಕ್ಷುಕನು ಒಂದಾಣೆ-ಯನ್ನು ಬೇಡಿದ್ದಾನೆ.

**ಕ. ಶ:—** ರಾಮಾಯಣ–रामायण(ಸ್ತ್ರೀ); ಸ್ವಚ್ಛ–साफ; ಇಡುವದು–रखना; ಅಣೆ–आना(ಪು)।

---

# पाठ 24

## पूर्ण भूतकाल (ಪೂರ್ಣ ಭೂತಕಾಲ)

ಭೂತಕಾಲದಲ್ಲಿ ಕ್ರಿಯಾಪದ ಕಾರ್ಯವು ಮುಗಿದು ಬಹಳ ಸಮಯ ಕಳೆದು ಹೋಗಿದೆ, ಎಂಬುದನ್ನು ಸೂಚಿಸುವದಕ್ಕೆ **ಪೂರ್ಣ ಭೂತಕಾಲ**ವೆನ್ನುತ್ತಾರೆ.

ಸಾಮಾನ್ಯ ಭೂತಕಾಲದ ರೂಪಗಳ ಮುಂದೆ हो ಸಹಾಯಕ ಧಾತುವಿನ ಭೂತಕಾಲದ ರೂಪಗಳಾದ था, थे, थी, थीं ಗಳನ್ನು ಕ್ರಿಯಾಪದವು ಅಕರ್ಮಕವಿದ್ದರೆ ಕರ್ತೃವಿನ ಲಿಂಗ, ವಚನಗಳಿಗನು-ಸಾರವಾಗಿಯೂ, ಸಕರ್ಮಕವಿದ್ದರೆ ಕರ್ಮದ ಲಿಂಗ, ವಚನಗಳಿಗನು-ಸಾರವಾಗಿಯೂ ಇಡುವದರಿಂದ ಪೂರ್ಣ ಭೂತಕಾಲದ ರೂಪ-ಗಳಾಗುತ್ತವೆ. ಉದಾ:—

(1) वे हुबली गये थे। ಅವರು ಹುಬ್ಬಳ್ಳಿಗೆ ಹೋಗಿದ್ದರು.

(2) गायें खडी थीं। ಆಕಳುಗಳು ನಿಂತಿದ್ದವು.

(3) आनंदने बेंगलूर देखा था।
ಆನಂದನು ಬೆಂಗಳೂರ ನೋಡಿದ್ದನು.

(4) सीताने फल खाये थे।
ಸೀತೆಯು ಹಣ್ಣುಗಳನ್ನು ತಿಂದಿದ್ದಳು.

ಪೂರ್ಣ ಭೂತಕಾಲದಲ್ಲಿ ಕ್ರಿಯಾಪದವು ಸಕರ್ಮಕವಿದ್ದರೆ ಕರ್ತೃವಿಗೆ ने ಪ್ರತ್ಯಯವು ಹತ್ತುತ್ತದೆ. ಹಾಗೂ ಕ್ರಿಯಾಪದವು **ने ನಿಯಮ**ಕ್ಕನುಸಾರವಾಗಿ ನಡೆಯುತ್ತದೆ. ಉದಾ:—

(1) अहल्याने भात खाया था। ಅಹಲ್ಯಾ ಅನ್ನ ಉಂಡಿದ್ದಳು.

(2) रामने चिट्ठी लिखी थी। ರಾಮನು ಚೀಟಿ ಬರೆದಿದ್ದನು.

(3) केशवने कहानियाँ पढी थीं।
ಕೇಶವನು ಕಥೆಗಳನ್ನು ಓದಿದ್ದನು.

ಸಾಮಾನ್ಯ ಭೂತಕಾಲ ಸ್ತ್ರೀಲಿಂಗ ಬಹುವಚನದ ಕ್ರಿಯಾಪದಗಳನ್ನು ಪೂರ್ಣ ಭೂತಕಾಲಕ್ಕೆ ಪರಿವರ್ತಿಸುವಾಗ ಅವುಗಳ ಅಂತ್ಯಾಕ್ಷರದಮೇಲಿನ ಅನುಸ್ವಾರವು ಲೋಪವಾಗುತ್ತವೆ.

ಉದಾ:—

| ಸಾಮಾನ್ಯ ಭೂತಕಾಲ | ಪೂರ್ಣ ಭೂತಕಾಲ |
| --- | --- |
| वे यहाँ आयीं। | वे यहाँ आयी थीं। |
| गोपालने रोटियाँ खायीं। | गोपालने रोटियाँ खायी थीं। |

## ಅಭ್ಯಸನಗಳು

(अ) ಕೆಳಗಿನ ವಾಕ್ಯಗಳ ಕ್ರಿಯಾಪದಗಳನ್ನು ಪೂರ್ಣ ಭೂತಕಾಲಕ್ಕೆ ಬದಲಾಯಿಸಿರಿ.

(1) राम कहाँ काम करता है। (2) भागीरथी कपडा बुनेगी। (3) विश्वनाथ शशिकलाको देखता है। (4) यह कलम मैं मोहनको दूँगी। (5) लक्ष्मी रो रही है। (6) तुम कागजपर क्या लिख रहे थे ? (7) समुद्र में जहाज डूब रहा था। (8) मेरी माँ कारवार गयी हैं। (9) लडके खेलते थे। (10) बंदर इमली खाअेंगे।

**ಕ. ಶ:**— जहाज(ಪು)–ಹಡಗು; डूबना–ಮುಳಗುವದು.

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಮೀನಾಕ್ಷಿಯು ನನ್ನನ್ನು ಹೋದವರ್ಷ ಮುಂಬಯಿಯಲ್ಲಿ ನೋಡಿದ್ದಳು. (2) ಪಂಡಿತ ಜವಾಹರಲಾಲರು ಚೌ-ಎನ್-ಲಾಯರಿಗೆ ಪತ್ರ ಬರೆದಿದ್ದರು. (3) ನಾನು ಈ ಟೊಪ್ಪಿಗೆಯನ್ನು ತುಮಕೂರಿನಲ್ಲಿ ಕೊಂಡಿದ್ದೆನು. (4) ನಾವೆಲ್ಲರೂ ಹಂಪೆಯನ್ನು ನೋಡಲು ಹೋಗಿದ್ದೆವು. (5) ಅಬ್ದುಲ್ಲಖಾದರರು ನಮಗೆ ಪುಸ್ತಕಗಳನ್ನು ಕೊಟ್ಟಿದ್ದರು. (6) ಆ ಹೆಣ್ಣುಮಕ್ಕಳು ನಿನ್ನೆ ಸಾರಸ್ವತಪುರಕ್ಕೆ ಆಡ್ಡಾಡಲು ಹೋಗಿದ್ದರು. (7) ರಶಿಯದ ವಾಯುಗಡಿಯಲ್ಲಿ ಅಮೇರಿಕಾದ ವಿಮಾನು ಹಾರಿತ್ತು. (8) ವಿದ್ಯಾರಣ್ಯರು ವಿಜಯನಗರ ರಾಜ್ಯವನ್ನು ಸ್ಥಾಪಿಸಿದ್ದರು. (9) ನೀವು ಪೇಟೆಯಿಂದ ಏನನ್ನು ತಂದಿದ್ದಿರಿ? (10) ಜಯಚಾಮರಾಜರು ಮೈಸೂರಿನಲ್ಲಿ ಬಹಳಕಾಲ ರಾಜ್ಯಕಾರಭಾರ ಮಾಡಿದ್ದರು.

ಕ. ಶ:— ಹೋದ ವರ್ಷ—पिछले साल; ವಾಯುಗಡಿ—वायु-सीमा; ಸ್ಥಾಪಿಸುವದು—स्थापना करना, ರಾಜ್ಯಕಾರಭಾರ—शासन (ಪು) ಅಥವಾ हुकूमत (ಸ್ತ್ರೀ); ಬಹಳಕಾಲ — बहुत समयतक।

---

## पाठ 25

### समुच्चयबोधकाव्यय (ಸಂಯೋಜಕಾವ್ಯಯಗಳು)

ಎರಡು ಶಬ್ದ, ಎರಡು ವಾಕ್ಯಾಂಶ ಇಲ್ಲವೆ ಎರಡು ವಾಕ್ಯಗಳನ್ನು ಕೂಡಿಸುವ ಅವ್ಯಯಕ್ಕೆ ಸಮುಚ್ಚಯಬೋಧಕಾವ್ಯಯ (ಸಂಯೋಜಕಾವ್ಯಯ)ವೆನ್ನುತ್ತಾರೆ. ಉದಾ:—

(1) सुनंदा और सुमित्रा आयीं। ಸುನಂದಾ ಮತ್ತು ಸುಮಿತ್ರಾ ಬಂದರು.

(2) केशव कहता है कि मैं गाँव नहीं जाऊँगा। ನಾನು ಊರಿಗೆ ಹೋಗುವದಿಲ್ಲವೆಂದು ಕೇಶವನು ಹೇಳುತ್ತಾನೆ.

(3) अेसाजी ग़रीब है, **पर** बेईमान नहीं। ಏಸಾಜಿಯು ಬಡವನಿರುತ್ತಾನೆ, ಆದರೆ ಅಪ್ರಮಾಣಿಕನಿರುವದಿಲ್ಲ.

(4) आज मैं दफ्तर नहीं जाऊँगा, **क्योंकि** आज छुट्टी है। ಇಂದು ನಾನು ಕಚೇರಿಗೆ ಹೋಗುವದಿಲ್ಲ, ಏಕೆಂದರೆ ಇಂದು ಸೂಟಿ ಇರುತ್ತದೆ.

(5) आप काशी गये, लेकिन मेरे लिये कुछ नहीं लाये। ತಾವು ಕಾಶಿಗೆ ಹೋದಿರಿ, ಆದರೆ ನನ್ನ ಸಲುವಾಗಿ ಏನೂ ತರಲಿಲ್ಲ.

(6) स्टेशन बहुत दूर है, **तो भी** वह पैदल जा रहा है। ಸ್ಟೇಶನ್ ಬಹಳ ದೂರವಿದೆ, ಆದರೂ ಅವನು ನಡೆದು ಹೋಗಹತ್ತಿದ್ದಾನೆ.

(7) आज तुम सिनेमा देखने आओगे, **या** नहीं। ಇಂದು ನೀನು ಸಿನೇಮಾಕ್ಕೆ ಬರುವಿಯೋ, ಅಥವಾ ಇಲ್ಲವೋ?

(8) **अगर** शशिकला आयेगी, **तो** शांता भी आयेगी। ಶಶಿಕಲಾ ಬಂದರೆ ಶಾಂತಾ ಕೂಡ ಬರುವಳು.

ಮೇಲಿನ ವಾಕ್ಯಗಳಲ್ಲಿ ದಪ್ಪಕ್ಷರಗಳಲ್ಲಿರುವ ಶಬ್ದಗಳು ಸಮುಚ್ಚಯಬೋಧಕಾವ್ಯಯ ಅಥವಾ ಸಂಯೋಜಕಾವ್ಯಯಗಳಿರುತ್ತವೆ.

## ಅಭ್ಯಾಸನೆಗಳು

(अ) ತೆರವಿದ್ದ ಸ್ಥಳದಲ್ಲಿ ಯೋಗ್ಯ ಸಂಯೋಜಕಾವ್ಯಯ-ವನ್ನು ತುಂಬಿರಿ.

(1) कमला तुम दूध पिओगी———चाय ? (2) मनोरमाने कहा———कलसे मैं हिन्दी सीखने आऊँगी। (3) लव———कुश सीताके बेटे थे। (4) बूढेके मुँह म दाँत न थे———वह चने खाता था। (5) आज रविवार है———मैं स्कूल नही जाऊँगा। (6) वह अस्पताल जा रहा है———बीमार है। (7) इस देहात मे सर्कस आयेगा———मैं जरूर देखूँगा। (8) बारिश में छाता लेकर जाओ———भीग जाओगे। (9) मैं बेंगलूर जाने-वाला था———पिताजीने आज्ञा नही दी। (10) वह अमीर है———पैसे खर्च नहीं करता।

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಸೂರ್ಯನು ನಮ್ಮಿಂದ ಅನೇಕ ಲಕ್ಷಮೈಲು ದೂರ-ದ್ದಾನೆ, ಆದರೂ ಅವನಿಂದ ಪ್ರಕಾಶ ಬರುತ್ತದೆ. (2) ಕೂಡಲೇ ಹೊರಡಿರಿ, ಇಲ್ಲವಾದರೆ ನಿಮಗೆ ಮೋಟರ ಸಿಗಲಿಕ್ಕಿಲ್ಲ. (3) ರಾಮನು ಊರಿಗೆ ಹೋಗುವದಿಲ್ಲವೆಂದು ಹೇಳುತ್ತಾನೆ. (4) ಅವರು ಮೊನ್ನೆಯೇ ರೇಡಿಯೋ ಕೊಳ್ಳುತ್ತಿದ್ದರು, ಆದರೆ ಅವರ ಹತ್ತಿರ ಹಣವಿರಲಿಲ್ಲ. (5) ನೀವು ಚನ್ನಾಗಿ ಅಭ್ಯಾಸಮಾಡಿರಿ, ಇಲ್ಲದಿದ್ದರೆ ನಪಾಸಾಗುವಿರಿ. (6) ಇಂದು ಗಾಡಿಯು ತಡವಾಗಿ ಬಂದಿತು, ಏಕೆಂದರೆ ಸೇತುವೆ ಕೆಟ್ಟಿತ್ತು. (7) ಇಂದು ಜವಾಹರ-

ಲಾಲರ ಭಾಷಣವಿದೆ, ಆದ್ದರಿಂದ ಜನರು ಬಹಳ ಕೂಡುತ್ತಾರೆ. (8) ಅವರು ನಮ್ಮ ಮನೆಗೆ ಬರುವರೋ, ಅಥವಾ ಇಲ್ಲವೋ? (9) ಗಾಂಧೀಜಿ ಮತ್ತು ಸುಭಾಸರ ವಿಷಯವಾಗಿ ನಿಮಗೇನು ಗೊತ್ತಿದೆ? (10) ಅವರು ಒಂದು ಸುಂದರ ಮನೆಯನ್ನು ಇಚ್ಛಿಸಿದರು, ಆದರೆ ಸಿಗಲಿಲ್ಲ.

ಕ. ಶ:— ಲಕ್ಷ–लाख(पु); ಕೂಡಲೇ–जल्दी; ಇಲ್ಲವಾದರೆ–नहीं तो; ತಡವಾಗಿ–देर से; ಕೆಡುವದು–नादुरुस्त होना; ಸೇತುವೆ–पुल(पु)।

# पाठ 26

## चाह प्रयोग (चाह ಎಂಬುದರ ಪ್ರಯೋಗ)

चाह ಇದರ ಅರ್ಥವು ಇಚ್ಛಿಸು, ಬಯಸು ಅಥವಾ ಇಷ್ಟಪಡು ಎಂದಾಗುತ್ತದೆ. ಉದಾ:—

(1) तुम क्या चाहते हो? ನೀನು ಏನು ಇಚ್ಛಿಸುತ್ತೀ?

(2) मैं हिन्दी सीखना चाहता हूँ। ನಾನು ಹಿಂದಿ ಕಲಿಯಲು ಇಚ್ಛಿಸುತ್ತೇನೆ.

(3) वह बेंगलूर जाना चाहता था। ಅವನು ಬೆಂಗಳೂರಿಗೆ ಹೋಗಲು ಇಚ್ಛಿಸುತ್ತಿದ್ದನು.

(4) मोहिनी रेशमके कपडे चाहती है। ಮೋಹಿನಿಯು ರೇಶ್ಮಿಯ ಬಟ್ಟೆಗಳನ್ನು ಇಚ್ಛಿಸುತ್ತಾಳೆ.

चाह ಇದು ಸಕರ್ಮಕ ಧಾತುವಿದ್ದುದರಿಂದ ಸಾಮಾನ್ಯ,

ಆಸನ್ನ ಮತ್ತು ಪೂರ್ಣ ಭೂತಕಾಲಗಳಲ್ಲಿ ಇದರ ಕರ್ತೃವಿಗೆ **ನೆ** ಪ್ರತ್ಯಯವು ಹತ್ತುತ್ತದೆ. ಆಗ ಕ್ರಿಯಾಪದವು **ನೆ** ನಿಯಮಕ್ಕನುಸರಿಸಿ ನಡೆಯುತ್ತದೆ. ಉದಾ:—

(1) अन्होंने पुस्तक पढना चाहा। ಅವರು ಪುಸ್ತಕವನ್ನು ಓದಲು ಇಚ್ಛಿಸಿದರು.

(2) जेबुन्नीसाने गुरूजीसे मिलना चाहा। ಜೇಬುನ್ನಿಸಾ ಗುರುಗಳಿಗೆ ಭೆಟ್ಟಿಯಾಗಲು ಇಚ್ಛಿಸಿದಳು.

(3) तुमने क्या चाहा था? ನೀನೇನು ಬಯಸಿದ್ದಿ?

(4) किसने यह कलम चाही? ಯಾವನು ಈ ಲೇಖನಿಯನ್ನು ಬಯಸಿದನು?

## ಅಭ್ಯಸನಗಳು

(अ) ಕಂಸಿನಲ್ಲಿ ಕೊಟ್ಟ ಕಾಲಕ್ಕನುಸಾರವಾಗಿ चाह ದ ರೂಪವನ್ನು ಸಿದ್ಧಪಡಿಸಿ ತೆರವಿದ್ದ ಸ್ಥಳದಲ್ಲಿ ತುಂಬಿರಿ.

(1) कुसुमाने साडी खरीदना——। (ಆಸನ್ನ ಭೂತಕಾಲ)

(2) कुत्ता बिल्ली पकडना——। (ಅಪೂರ್ಣ ಭೂತಕಾಲ)

(3) मैं शास्त्रीय संगीत सुनना——। (ಸಾಮಾನ್ಯ ವರ್ತಮಾನಕಾಲ)

(4) शोभा क्या——। (ಸಾಮಾನ್ಯ ಭವಿಷ್ಯತ್ಕಾಲ)

(5) नटखट लडके सिर्फ घूमना——। (ಸಾಮಾನ್ಯ ವರ್ತಮಾನಕಾಲ)

(6) गांधीजीने क्या——? (ಪೂರ್ಣ ಭೂತಕಾಲ)

(7) गीता आदर्श हिन्दी विद्यालयके वार्षिकोत्सव में नाचना——। (ತಾತ್ಕಾಲಿಕ ಭೂತಕಾಲ)

(8) शांता हमारे घर आना——। (ಅಪೂರ್ಣ ಭೂತಕಾಲ)

(9) अुन्होंने मुझसे पूछा कि तुम क्या——। (ಸಾಮಾನ್ಯ ವರ್ತಮಾನಕಾಲ)

(10) वह लडकी कभी वैभव नहीं——। (ಸಾಮಾನ್ಯ ಭವಿಷ್ಯತ್ಕಾಲ)

(ब) ಹಿಂದಿಯಲ್ಲಿ ಭಾಷಾಂತರಿಸಿರಿ:--

(1) ಅವರು ಈ ಸಭೆಯಲ್ಲಿ ಮಾತನಾಡ ಬಯಸುತ್ತಾರೆ. (2) ದ್ರೌಪದಿಯು ಕಮಲವನ್ನು ಬಯಸಿದ್ದಳು. (3) ಸ್ವಾಮಿಗಳನ್ನು ಯಾರು ಭೆಟ್ಟಿಯಾಗಲು ಬಯಸಿದ್ದರು? (4) ನಾವು ವಿಮಾನದಲ್ಲಿ ಕೂಡ್ರಬಯಸುತ್ತೇವೆ. (5) ನಮ್ಮ ತಾಯಿಯವರು ಪ್ರತಿ ದಿನವೂ ನೂಲ ಬಯಸುತ್ತಾರೆ. (6) ಇವರು ಪ್ರಸಾದರ ಬಗ್ಗೆ ಏನೋ ಹೇಳಬಯಸಿದ್ದರು. (7) ಜೀವನರಾಯರು ಸಂಸ್ಕೃತವನ್ನು ಕಲಿಯಬಯಸುತ್ತಿದ್ದರು. (8) ತಾವು ಏನನ್ನು ಇಷ್ಟಪಡುತ್ತೀರಿ? (9) ಆ ಹೆಣ್ಣುಮಕ್ಕಳು ಪುರಾಣ ಓದ ಬಯಸಿದ್ದರು. (10) ಅವರು ಸಭೆಯಲ್ಲಿ ಹಾಡಲು ಇಚ್ಛಿಸಲಿಲ್ಲ.

**ಕ. ಶ:**— ನೂಲುವದು–कातना; ಏನೋ–कुछ।

---

# पाठ 27

## चाहिये (चाहिये ಎಂಬುದರ ಪ್ರಯೋಗ)

चाहिये ಇದರ ಅರ್ಥವು 'ಬೇಕು' ಎಂದಾಗುತ್ತದೆ. ಇದು

ವಾಕ್ಯದಲ್ಲಿ ಕ್ರಿಯಾಪದವಿದ್ದಾಗ ಇದರ ಕರ್ತೃಪದಕ್ಕೆ ಯಾವಾಗಲೂ ಚತುರ್ಥಿ ವಿಭಕ್ತಿ ಪ್ರತ್ಯಯ को ಹತ್ತುತ್ತದೆ. ಉದಾ:—

(1) तुम्हें क्या चाहिये ? ನಿನಗೇನು ಬೇಕು ?

(2) मुझे ठंडा पानी चाहिये । ನನಗೆ ತಣ್ಣೀರು ಬೇಕು.

(3) उन्हें कुछ भी नहीं चाहिये । ಅವರಿಗೆ ಏನೂ ಬೇಡ.

(4) मोहनको पाँच रुपये चाहिये ।
ಮೋಹನನಿಗೆ ಐದು ರೂಪಾಯಿಗಳು ಬೇಕು.

चाहिये ಇದು ಕೃದಂತ ಭಾವನಾಮದ ಮುಂದೆ ಉಪಯೋಗಿಸಲ್ಪಟ್ಟಾಗ ಕಾರ್ಯದ ಆವಶ್ಯಕತೆಯು ಸೂಚಿತವಾಗುತ್ತದೆ. ಇದು ಸಾಮಾನ್ಯ ವರ್ತಮಾನ ಮತ್ತು ಭೂತಕಾಲಗಳಲ್ಲಿ ಉಪಯೋಗಿಸಲ್ಪಡುತ್ತದೆ. ಅಕರ್ಮಕ ಧಾತುವಿದ್ದಾಗ ಅಥವಾ ಸಕರ್ಮಕ ಧಾತುವಿದ್ದು, ಕರ್ಮ ಗುಪ್ತವಿದ್ದಾಗ ಕ್ರಿಯಾಪದವು ಪುಲ್ಲಿಂಗ ಏಕವಚನವಾಗಿರುತ್ತದೆ. ಉದಾ:—

(1) विद्यार्थियोंको बेचोंपर बैठना चाहिये ;
ವಿದ್ಯಾರ್ಥಿಗಳು ಬೆಂಚಿನಮೇಲೆ ಕೂಡ್ರಬೇಕು.

(2) उनको खाना चाहिये । ಅವರು ಉಣ್ಣಬೇಕು.

(3) कुसुमा को नहीं पढना चाहिये ।
ಕುಸುಮಾ ಓದಬಾರದು.

(4) हमें गाँव जाना चाहिये । ನಾವು ಊರಿಗೆ ಹೋಗಬೇಕು.

(5) विद्यार्थिनियोंको चुपचाप बैठना चाहिये था ।
ವಿದ್ಯಾರ್ಥಿನಿಯರು ಸುಮ್ಮನೆ ಕೂಡ್ರಬೇಕಾಗಿತ್ತು.

ಧಾತುವು ಸಕರ್ಮಕವಾಗಿದ್ದಾಗ ಕರ್ಮದ ಲಿಂಗ ವಚನಕ್ಕನುಸಾರವಾಗಿ ಕ್ರಿಯಾಪದವು ನಡೆಯುತ್ತದೆ. ಉದಾ:—

(1) हमको फल खाना चाहिये।
ನಾವು ಹಣ್ಣನ್ನು ತಿನ್ನಬೇಕು.

(2) आपको केले खाने चाहिये।
ನಾವು ಬಾಳೇಹಣ್ಣುಗಳನ್ನು ತಿನ್ನಬೇಕು.

(3) रामको किताब नहीं पढनी चाहिये।
ರಾಮನು ಪುಸ್ತಕವನ್ನು ಓದಬಾರದು.

(4) गोविंदको काम करना चाहिये था।
ಗೋವಿಂದನು ಕೆಲಸವನ್ನು ಮಾಡಬೇಕಾಗಿತ್ತು.

(5) वसंतको क़लम खरीदनी चाहिये थी।
ವಸಂತನು ಲೇಖನಿ ಕೊಳ್ಳಬೇಕಾಗಿತ್ತು.

## ಅಭ್ಯಸನಗಳು

(अ) ಕೆಳಗಿನ ವಾಕ್ಯಗಳನ್ನು चाहिये ಪ್ರಯೋಗಕ್ಕೆ ಬದಲಾಯಿಸಿರಿ

(1) सुमित्रा आज कहाँ जाती है? (2) रवींद्रने परसों बारह आम खाये थे। (3) कांचनमाला, तुम अैसा नहीं करना। (4) लडके स्कूल में पाठ पढते हैं। (5) हम तुमको छोडकर कहाँ जायेंगे? (6) हम यह बुरा काम कभी नहीं करेंगे। (7) वह मुझे किताब देता है। (8) पुरोहितजी गंगाका पानी ही पीते हैं। (9) सीता नौ बजे सोती है। (10) शिवरावने हमारे घर में चाय पी थी।

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಪ್ರನಿಯೊಬ್ಬನು ಸತ್ಯವನ್ನೇ ನುಡಿಯಬೇಕು.

(2) ನೀನು ಬೇಗ ಮನೆಗೆ ಹೋಗಬೇಕು. (3) ನಾವು ದಿನಾಲು ವ್ಯಾಯಾಮ ಮಾಡಬೇಕು. (4) ನಾವು ನಮ್ಮ ದೇಶವನ್ನೂ ಮತ್ತು ದೇಶದ ಜನರನ್ನೂ ಪ್ರೀತಿಸಬೇಕು. (5) ಎಲ್ಲರೂ ಶುದ್ಧ-ವಾದ ಖಾದಿ ಬಟ್ಟೆಗಳನ್ನು ತೊಟ್ಟುಕೊಳ್ಳಬೇಕು. (6) ಪ್ರಶ್ನೆ-ಗಳನ್ನು ನೀನು ಎದ್ದು ನಿಂತು ಕೇಳಬೇಕು. (7) ಇಂದು ತಾವು ನಮ್ಮ ಮನೆಯಲ್ಲಿ ಊಟಮಾಡಬೇಕು. (8) ಪ್ರತಿಯೊಬ್ಬ ಭಾರತೀ-ಯನೂ ರಾಷ್ಟ್ರಭಾಷೆಯಾದ ಹಿಂದಿಯನ್ನು ಕಲಿಯಲೇಬೇಕು. (9) ಮಲ್ಲಿಕಾರ್ಜುನ, ನೀನು ದುಷ್ಟರ ಸಹವಾಸ ಮಾಡಬಾರದು. (10) ಮೇಲಿಂದಮೇಲೆ ಊಟವನ್ನು ಮಾಡಬಾರದು.

---

# पाठ 28

## कर (कर ಎಂಬುದರ ಪ್ರಯೋಗ)

ಧಾತುಗಳಿಗೆ कर ಎಂಬುದನ್ನು ಹಚ್ಚುವದರಿಂದ ಪೂರ್ವ-ಕಾಲಿಕ ಕೃದಂತದ ರೂಪಗಳಾಗುತ್ತವೆ. ಉದಾ:— खाकर—ತಿಂದು; जाकर—ಹೋಗಿ; पीकर—ಕುಡಿದು; सोकर—ಮಲಗಿ; आकर—ಬಂದು; देखकर—ನೋಡಿ.

ಧಾತುಗಳಿಗೆ कर ಇದರ ಸ್ಥಾನದಲ್ಲಿ के ಹಚ್ಚುವದರಿಂದಲೂ ಪೂರ್ವಕಾಲಿಕ ಕೃದಂತದ ರೂಪಗಳಾಗುತ್ತವೆ. ಆದರೆ कर ಧಾತು-ವಿಗೆ कर ಎಂದು ಹಚ್ಚದೆ के ಎಂದೇ ಹಚ್ಚಬೇಕು. ಉದಾ:—

कर के—ಮಾಡಿ; खा के—ಉಂಡು; धो के—ಒಗೆದು; चल के—ನಡೆದು; पढ के—ಓದಿ; लिख के—ಬರೆದು.

ಪೂರ್ವಕಾಲಿಕ ಕೃದಂತಗಳಿಂದ ಮುಖ್ಯ ಕ್ರಿಯೆಯು, ಪೂರ್ವದಲ್ಲಿ ಆಗುವ ಕಾರ್ಯಸಮಾಪ್ತಿಯು ಬೋಧವಾಗುತ್ತದೆ.

ಉದಾ:—

(1) परिमळा नयी साडी **पहन कर** गाँव गयी ।
ಪರಿಮಳಾ ಹೊಸ ಸೀರೆ ಉಟ್ಟುಕೊಂಡು ಊರಿಗೆ ಹೋದಳು.

(2) स्नेहलताने स्नान **करके** भोजन किया ।
ಸ್ನೇಹಲತಾ ಸ್ನಾನಮಾಡಿ ಊಟಮಾಡಿದಳು.

(3) वह नाश्ता **करके** स्कूल जायेगा ।
ಅವನು ಉಪಹಾರ ಮುಗಿಸಿ ಶಾಲೆಗೆ ಹೋಗುವನು.

(4) मिठाई **देखकर** बच्चा खुश होता है ।
ಮಿಠಾಯಿ ನೋಡಿ ಮಗು ಆನಂದಗೊಳ್ಳುತ್ತದೆ.

## ಅಭ್ಯಸನಗಳು

(अ) कर ಎಂಬುದನ್ನು ಉಪಯೋಗಿಸಿ ವಾಕ್ಯಗಳನ್ನು ಕೂಡಿಸಿ ಬರೆಯಿರಿ.

(1) प्रभाकरने पाठ पढा। वह स्कूल गया। (2) शांता अुठी। वह चाय बनाने लगी। (3) बच्चा माँ को देखता है। वह खुश होता है। (4) शशिकलाने गुरूजीको देखा। शशिकला हँसने लगी। (5) कमानसे तीर निकला। वह हिरनको लगा। (6) वह कसरत करता है। वह पहलवान बनता है। (7) मैं हाथ-मुँह धोअूँगा। खाने बैठूँगा। (8) वे मैसूर जाअेंगे। रेशमकी साडी लाअेंगे। (9) तुम मेहनत करते थे।

मेवा खाते थे। (10) करीमखाँ मस्जिद जाते थे। नमाज पढते थे।

**ಕ. ಶ:—** बच्चा–ಮಗು; खुश होना–ಸಂತೋಷ-ಗೊಳ್ಳುವದು; कमान (ಸ್ತ್ರೀ)–ಬಿಲ್ಲು; तीर (ಪು)–ಬಾಣ; मेहनत (ಸ್ತ್ರೀ)–ಪರಿಶ್ರಮ; मेवा (ಪು)–ಒಣಗಿಸಿದ ಹಣ್ಣು (ಉತ್ತತ್ತಿ, ಬದಾಮು, ಗೋಡಂಬಿ; ಇತ್ಯಾದಿ.)

**(ब) ಹಿಂದಿಯಲ್ಲಿ ಭಾಷಾಂತರಿಸಿರಿ:—**

(1) ನೀನು ಯಾವಾಗಲೂ ವಿಚಾರಮಾಡಿ ಕೆಲಸಮಾಡು. (2) ನಾನು ಹುಬ್ಬಳ್ಳಿಗೆ ಹೋಗಿ ಕಿಂಗಕಾಂಗನ ಕುಸ್ತಿ ನೋಡುವೆನು. (3) ಹರಿದಾಸನ ಮಾತನ್ನು ಕೇಳಿ ವೆಂಕಟರಮಣನು ಸಿಟ್ಟಿಗೆದ್ದನು. (4) ಲಲಿತಾ, ಹೋಗಿ ಒಂದು ಬಟ್ಟಲು ತಣ್ಣೀರನ್ನು ತೆಗೆದುಕೊಂಡು ಬಾ. (5) ಅವಳು ನದಿಯಲ್ಲಿ ಸ್ನಾನಮಾಡಿ ಗುಡಿಗೆ ಹೋಗುತ್ತಾಳೆ. (6) ಶಿವಬಸಪ್ಪ, ನೀನು ಹಿಂದಿ ಕಲಿತು ಏನುಮಾಡುವೆ? (7) ಇಂದು ರಾತ್ರಿ ನಾನು ಒಂದು ಕಥೆಯನ್ನು ಓದಿ ಮಲಗುವೆನು. (8) ಹುಲಿಯನ್ನು ನೋಡಿ ನರಿಯು ಓಡಿಹೋಯಿತು. (9) ಅವನು ಟೊಂಗೆಯಮೇಲೆ ಹೂವನ್ನು ನೋಡಿ ಹರಿದುಕೊಂಡನು. (10) ಶಂಕರನು ಆಕಳ ಹಾಲನ್ನು ಕುಡಿದು ಆರೋಗ್ಯವಂತನಾಗಿದ್ದಾನೆ.

**ಕ. ಶ:—** ಕುಸ್ತಿ–कुश्ती (ಸ್ತ್ರೀ); ಸಿಟ್ಟಿಗೇಳುವದು–नाराज होना; ನರಿ–सियार (ಪು); ಹರಿದುಕೊಳ್ಳುವದು–तोड लेना; ಆರೋಗ್ಯವಂತ–तंदुरुस्त।

# पाठ 29

## सक (ಸಕ ಎಂಬುದರ ಪ್ರಯೋಗ)

ಸಕನಾ ಇದು ಸಹಾಯಕ ಕ್ರಿಯೆಯಾಗಿದ್ದು ಸಾಮರ್ಥ್ಯ ಸೂಚಕವಾಗಿರುತ್ತದೆ. ಇದು ಸ್ವತಂತ್ರ ಕ್ರಿಯೆಯಾಗಿ ಬರದೆ ಮುಖ್ಯ ಕ್ರಿಯೆಯೊಡನೆ ಬರುತ್ತದೆ. ಆಗ ಕರ್ತೃವಿನ ಲಿಂಗ ವಚನಗಳಿಗನುಸಾರವಾಗಿ ಮತ್ತು ಕಾಲಗಳಿಗನುಸಾರವಾಗಿ ಈ ಸಕ ಸಹಾಯಕ ಕ್ರಿಯೆಯೇ ಬದಲಾವಣೆ ಹೊಂದುತ್ತದೆ. ಉದಾ:—

(1) मैं वह बोझ अुठा नहीं सकता ।
ನಾನು ಆ ಭಾರವನ್ನು ಎತ್ತಲಾರೆ.

(2) वह लडकी रसोई बना सकेगी ।
ಆ ಹುಡುಗಿ ಅಡಿಗೆಯನ್ನು ಮಾಡಬಲ್ಲಳು.

(3) वह गधा बोझ ढो नहीं सका ।
ಆ ಕತ್ತೆಯು ಭಾರವನ್ನು ಹೊರಲು ಅಸಮರ್ಥವಾಯಿತು.

(4) क्या तुम तैर सकोगे ? ನೀನು ಈಜ ಬಲ್ಲೆಯಾ?

ಸಕ ಇದು ಭೂತಕಾಲಗಳಲ್ಲಿ ಪ್ರಯೋಗಿಸಲ್ಪಟ್ಟಾಗ ಕರ್ತೃವಿಗೆ ने ಪ್ರತ್ಯಯ ಹತ್ತುವದಿಲ್ಲ. ಉದಾ:—

(1) वह काम नहीं कर सका ।
ಅವನು ಕೆಲಸಮಾಡಲು ಅಸಮರ್ಥನಾದನು.

(2) वे रामायण पढ सके थे ।
ಅವರು ರಾಮಾಯಣ ಓದಲು ಸಮರ್ಥರಾಗಿದ್ದರು.

ಸಕ ಇದಕ್ಕೆ ಬಲ್ಲೆ, ಬಹುದು ಎಂಬ ಅರ್ಥಗಳಾಗುತ್ತವೆ. ಇದರ ಸಾಮಾನ್ಯ ವರ್ತಮಾನಕಾಲ ಮತ್ತು ಸಾಮಾನ್ಯ ಭವಿಷ್ಯ.

ತ್ಕಾಲಗಳ ರೂಪಗಳ ಕನ್ನಡ ಅನುವಾದವು ಒಂದೇ ರೀತಿಯಾಗಿರು-
ತ್ತದೆ. ಉದಾ:—

(1) मैं कर सकता हूँ। } ನಾನು ಮಾಡಬಲ್ಲೆನು.
(2) मैं कर सकूँगा।

## ಅಭ್ಯಾಸನಗಳು

(अ) ಕೆಳಗಿನ ಕ್ರಿಯಾಪದಗಳ ಕಾಲಗಳನ್ನು ಬದ-
ಲಾಯಿಸದೆ सक ವನ್ನು ಪ್ರಯೋಗಿಸಿರಿ.

(ಉದಾ:— वह क्या करता है–वह क्या कर सकता है?)

(1) वह बहुत तेज चलता है। (2) तोता बोलता है। (3) वे हमारे यहाँ कितने दिन ठहरेंगे। (4) प्रभुदासने नाटक लिखा। (5) परसों अेक जलसे में भारतीने अच्छा नृत्य किया। (6) कल हम बिजापुर गये थे। (7) क्या गाडी पहुँची होगी? (8) शांता अब हिन्दी अुपन्यास पढती है। (9) सभी जातिवाले इस कुँअे में पानी भरते हैं। (10) कल मैं अपने दोस्तको पत्र लिखूँगा।

ಕ. ಶ:— अुपन्यास(ಪು)–ಕಾದಂಬರಿ; कुँआ(ಪು)–ಬಾವಿ.

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಮನುಷ್ಯರು ಯೋಚಿಸಬಲ್ಲರು; ಆದರೆ ಪಶುಗಳು ಯೋಚಿಸಲಾರವು. (2) ಅವಳು ಹಿಂದಿಯನ್ನು ತಿಳಿದುಕೊಳ್ಳ-ಬಲ್ಲಳು. (3) ಆ ಹುಡಗನು ವೇಗವಾಗಿ ಓಡಬಲ್ಲನು.

(4) ಮೋಹನನು ಈ ಕೆಲಸವನ್ನು ಬಹಳ ಬೇಗ ಮಾಡಬಲ್ಲನು. (5) ಇವನು ಕರೀಮುಖಾನರಂತೆ ಹಾಡ ಬಲ್ಲನು. (6) ನನ್ನ ಮಗನು ನೂರರವರೆಗೆ ಎಣಿಸಬಲ್ಲನು. (7) ಕೃಷ್ಣನು ಮರವನ್ನು ಏರಲಾರನು. (8) ಅವರು ನಾಳೆ ದಿಲ್ಲಿಯನ್ನು ತಲುಪಬಹುದು. (9) ಅವನು ನೆಲವನ್ನು ಅಗಿಯದಾದನು. (10) ಅವರು ಮನೆಯನ್ನು ಭಾಡಿಗೆ ಕೊಡದಾದರು.

**ಕ. ಶ:**— ಎಣಿಸುವದು—गिनना; ಏರುವದು—चढना; ತಲುಪುವದು—पहुँचना; ಅಗಿಯುವದು—खोदना; ಭಾಡಿಗೆ—किराया(ಪು)।

---

# पाठ 30

## चुक (ಚುಕ ಪ್ರಯೋಗ)

चुकना ಇದು ಸಹಾಯಕ ಕ್ರಿಯೆಯಾಗಿದ್ದು ಪೂರ್ಣತಾ-ಬೋಧಕವಾಗಿರುತ್ತದೆ. ಇದು ಸ್ವತಂತ್ರ ಕ್ರಿಯೆಯಾಗಿ ಬರದೆ ಮುಖ್ಯ ಕ್ರಿಯೆಯೊಡನೆ ಬರುತ್ತದೆ. ಆಗ ಕರ್ತೃವಿನ ಲಿಂಗ ವಚನ-ಗಳಿಗನುಸಾರವಾಗಿ ಮತ್ತು ಕಾಲಗಳಿಗನುಸಾರವಾಗಿ ಈ चुक ಸಹಾಯಕ ಕ್ರಿಯೆಯೇ ಬದಲಾವಣೆ ಹೊಂದುತ್ತದೆ. ಉದಾ:—

(1) मैं यह काम कर चुकूँगा।
ನಾನು ಈ ಕೆಲಸಮಾಡಿ ಮುಗಿಸುವೆನು.

(2) मोहन किताब पढ चुकता है।
ಮೋಹನನು ಪುಸ್ತಕವನ್ನು ಓದಿ ಮುಗಿಸುತ್ತಾನೆ.

(3) सीता सर्कस देख चुकी थी।
ಸೀತಾ ಸರ್ಕಸ ನೋಡಿ ಮುಗಿಸಿದ್ದಳು.

(4) रमेश हिसाब कर चुका है।

ರಮೇಶನು ಲೆಕ್ಕಮಾಡಿ ಮುಗಿಸಿದ್ದಾನೆ.

(5) वह कहानी लिख चुका।

ಅವನು ಕಥೆಯನ್ನು ಬರೆದು ಮುಗಿಸಿದನು.

ಚುಕನಾ ಇದು ಸಾಮಾನ್ಯ ಭೂತಕಾಲದಲ್ಲಿ ಪ್ರಯೋಗಿಸಲ್ಪಟ್ಟಾಗ ಕರ್ತೃವಿನ ಕಾರ್ಯ ಅಸಮರ್ಥತೆ ಕೂಡ ವ್ಯಕ್ತವಾಗುತ್ತದೆ. ಉದಾ:—

(1) तुम काम कर चुके! ನೀನು ಕೆಲಸಮಾಡಿದ ಹಾಗಾಯಿತು! (ಮಾಡುವ ಯೋಗ್ಯತೆ ಇಲ್ಲ–ಎಂದು ಅರ್ಥ).

(2) वह अमरकोश पढ चुका! ಅವನು ಅಮರಕೋಶ ಓದಿ ಮುಗಿಸಿದ ಹಾಗಾಯಿತು! (ಓದುವ ಯೋಗ್ಯತೆ ಇಲ್ಲ–ಎಂದು ಅರ್ಥ.)

ಚುಕ ಇದು ಭೂತಕಾಲಗಳಲ್ಲಿ ಪ್ರಯೋಗಿಸಲ್ಪಟ್ಟಾಗ ಕರ್ತೃವಿಗೆ ने ಪ್ರತ್ಯಯ ಹತ್ತುವದಿಲ್ಲ. ಉದಾ:—

(1) वह भोजन कर चुका।

ಅವನು ಊಟಮಾಡಿ ಮುಗಿಸಿದನು.

(2) आनंद पैसा दे चुका।

ಆನಂದನು ಹಣಕೊಟ್ಟು ಮುಗಿಸಿದನು.

## ಅಭ್ಯಸನಗಳು

(अ) ಕೆಳಗಿನ ವಾಕ್ಯಗಳ ಕ್ರಿಯಾಪದಗಳ ಕಾಲಗಳನ್ನು ಬದಲಾಯಿಸದೆ ಚುಕ ವನ್ನು ಪ್ರಯೋಗಿಸಿರಿ.

[ಉದಾ:— राम फल खाता है – राम फल खा चुकता है; मोहन ने मोटर खरीदी थी – मोहन मोटर खरीद चुका था]

(1) माँ दूध दुहती है। (2) किसान हल जोतता है। (3) गंगाधर कपडे धोअेगा। (4) भिक्षुक रोटी माँगेगा। (5) कमलाने शादी के लिये नयी साडी खरीदी है। (6) शांता अपना वचन पूरा करेगी। (7) शिवप्पने अपनी बहिनकी शादी की। (8) आपने गदग जाकर क्या किया है? (9) कल नौ बजेतक मैं अपना गाँव पहुँचा था। (10) मैं अेक महीने के अंदर चीनी भाषा सीखूंगा।

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಅವರು ಮೈಸೂರ ನೋಡಿ ಮುಗಿಸಿದ್ದಾರೆ. (2) ಕಮಲೆಯು ಕಾಗದವನ್ನು ಬರೆದು ಮುಗಿಸಿದಳು. (3) ನಾನು ಈ ಪುಸ್ತಕವನ್ನು ಎರಡು ದಿನಗಳಲ್ಲಿ ಓದಿ ಮುಗಿಸುವೆನು. (4) ಅವರು(ಸ್ತ್ರೀ) ತಮ್ಮ ಕೆಲಸವನ್ನು ಮಾಡಿ ಮುಗಿಸಿ ಬಿಟ್ಟಿದ್ದರು. (5) ಶಶಿಕಲಾ ಹಿಂದಿ-ಗುರುಗಳೊಡನೆ ಮಾತನಾಡಿ ಮುಗಿಸಿದ್ದಳು. (6) ಹದಿನೈದು ಮಿನಿಟುಗಳಲ್ಲಿ ಇಪ್ಪತ್ತು ಹಣ್ಣುಗಳನ್ನು ತಿಂದು ಬಿಟ್ಟಿದ್ದರು. (7) ರಜನಿಯು ರೇಡಿಯೋದಲ್ಲಿ ಹಾಡಿಬಿಟ್ಟಿದ್ದಳು. (8) ನಾವು ಪುಸ್ತಕವನ್ನು ಬರೆದು ಮುಗಿಸಿದೆವು. (9) ಗುರುಗಳು ಹುಡುಗರಿಗೆ ಪಾಠ ಹೇಳಿ ಮುಗಿಸಿದರು. (10) ವೈಜಯಂತಿ ಒಮ್ಮೆ ಧಾರವಾಡಕ್ಕೆ ಬಂದು ನೃತ್ಯ ಮಾಡೇ ಬಿಟ್ಟಳು.

# पाठ 31

## होना, पडना प्रयोग (ಹೋನಾ, ಪಡನಾ ಪ್ರಯೋಗ)

ಕೃದಂತ ಭಾವನಾಮಗಳ ಮುಂದೆ ಹೋನಾ ಮತ್ತು ಪಡನಾ ಇವು ಪ್ರಯೋಗಿಸಲ್ಪಟ್ಟಾಗ 'ಆವಶ್ಯಕತೆ'ಯು ಸೂಚಿತವಾಗುತ್ತದೆ. **ಹೋನಾ** ಇದರಿಂದ ಸಾಧಾರಣ ಆವಶ್ಯಕತೆಯು ಸೂಚಿತವಾಗುತ್ತಿದ್ದರೆ **ಪಡನಾ** ಇದರಿಂದ ಅತ್ಯಂತ ಆವಶ್ಯಕತೆಯೊಂದಿಗೆ ಕರ್ತೃವಿನ ನಿರುಪಾಯ ಸ್ಥಿತಿಯು ಸೂಚಿತವಾಗುತ್ತದೆ. ಇವುಗಳ ಕರ್ತೃವಿಗೆ ಯಾವಾಗಲೂ ಚತುರ್ಥಿ ವಿಭಕ್ತಿ ಪ್ರತ್ಯಯ को ಹತ್ತುತ್ತದೆ. ಕ್ರಿಯಾಪದವು ಸಕರ್ಮಕವಿದ್ದಾಗ ಅದು ಕರ್ಮದ ಲಿಂಗ ವಚನಗಳಿಗನುಸಾರವಾಗಿ ನಡೆಯುತ್ತದೆ. ಉದಾ:—

(1) रामरावजी को मोटर खरीदनी पडी। ರಾಮರಾಯರು ಮೋಟರ ಕೊಳ್ಳಬೇಕಾಯಿತು.

(2) मुझे आज दस आम खाने पडते हैं। ನಾನು ಇಂದು ಹತ್ತು ಮಾವಿನಹಣ್ಣುಗಳನ್ನು ತಿನ್ನಬೇಕಾಗುತ್ತದೆ.

(3) विजयानंद को चार किताबें पढनी पडेंगी। ವಿಜಯಾನಂದನು ನಾಲ್ಕು ಪುಸ್ತಕಗಳನ್ನು ಓದಬೇಕಾಗುವದು.

(4) आपको आज भाषण करना है। ತಾವು ಇಂದು ಭಾಷಣಮಾಡಬೇಕಾಗಿದೆ.

(5) रुद्रय्या को कलम खरीदनी होगी। ರುದ್ರಯ್ಯನು ಲೇಖನಿ ಕೊಳ್ಳಬೇಕಾಗುವದು.

ಕರ್ಮಕ್ಕೆ को ವಿಭಕ್ತಿ ಪ್ರತ್ಯಯ ಹತ್ತಿದಾಗ ಅಥವಾ ಕರ್ಮವು ಗುಪ್ತವಿದ್ದಾಗ ಮತ್ತು ಅಕರ್ಮಕ ಕ್ರಿಯೆ ಇದ್ದಾಗ

ಕ್ರಿಯಾಪದವು ಯಾವಾಗಲೂ ಪುಲ್ಲಿಂಗ ಏಕವಚನದಂತೆ ನಡೆಯು-ತ್ತದೆ. ಉದಾ:—

(1) कमलाको आज दो बजे खाना पडा। ಕಮಲೆಯು ಇಂದು ಎರಡು ಘಂಟೆಗೆ ಊಟ ಮಾಡಬೇಕಾಯಿತು.

(2) तुमको बेंगलूर कब जाना होगा? ನೀವು ಬೆಂಗಳೂರಿಗೆ ಯಾವಾಗ ಹೋಗಬೇಕಾಗುವದು?

(3) गीता को गाडी पकडने दौडना पडा। ಗೀತಾ ಗಾಡಿ ಹಿಡಿಯಲು ಓಡಬೇಕಾಯಿತು.

(4) गुलामको लाचार होकर अपनी लडकी को ही बेचना पडा। ಗುಲಾಮನು ನಿರುಪಾಯನಾಗಿ ತನ್ನ ಮಗಳನ್ನೇ ಮಾರಬೇಕಾಯಿತು.

## ಅಭ್ಯಾಸನಗಳು

(अ) ಕೆಳಗಿನ ವಾಕ್ಯಗಳ ಕ್ರಿಯಾಪದಗಳ ಕಾಲಗಳನ್ನು ಬದಲಾಯಿಸದೆ होना, पडना ಗಳನ್ನು ಉಪಯೋಗಿಸಿರಿ.

(1) आज मैं लडकों को हिन्दी पढाऊँगा। (2) माँ रोटी बनाती है। (3) बकुला कल अेक हिन्दी गीत गायेगी। (4) सरस्वतीने अपने लिये अेक नयी साडी खरीदी। (5) शशिकला हिन्दी बोलती थी। (6) हम कल मेला देखने गये थे। (7) ग्वाला दूध दुहता है। (8) सुशीला पानी लायी। (9) गोपालने ग़रीबको कपडे दिये। (10) किसान खेत में बीज बोता था।

ಕ. ಶ:— मेला(ಪು)–ಜಾತ್ರೆ; ग्वाला(ಪು)–ಗೌಳಿಗ.

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಅವರು ನಾಟಕವನ್ನು ನೋಡಬೇಕಾಯಿತು. (2) ನಾವು ಪುಸ್ತಕವನ್ನು ಬರೆಯಬೇಕಾಯಿತು. (3) ಅಶೋಕನು ಪರೀಕ್ಷೆಗಾಗಿ ರಜೆ ತೆಗೆದುಕೊಳ್ಳಬೇಕಾಗುವದು. (4) ಶಿವಬಸಪ್ಪನವರು ಮುರಘಾಮಠಕ್ಕೆ ಹತ್ತು ಚೀಲ ಜೋಳವನ್ನು ಕೊಡಬೇಕಾಗುವದು. (5) ಸುನಂದಾ ಬೆಳಿಗ್ಗೆ ಐದು ಘಂಟೆಗೆ ಏಳಬೇಕಾಗುವದು. (6) ಅವರು ಮೇಲಿಂದಮೇಲೆ ಸ್ಟೇಶನ್ನಕ್ಕೆ ಹೋಗಬೇಕಾಗುತ್ತದೆ. (7) ಭಾಗೀರಥಿಬಾಯಿಯವರು ತಮ್ಮ ಮಗಳನ್ನು ಮೈಸೂರಿಗೆ ಕಳುಹಿಸಬೇಕಾಯಿತು. (8) ದೇಶವು ಗಾಂಧೀಜಿಯವರ ಮರಣದ ವಾರ್ತೆಯನ್ನು ಕೇಳಬೇಕಾಯಿತು. (9) ನೇತಾಜಿ ಸುಭಾಸಚಂದ್ರ ಬೋಸರು ಸ್ವಾತಂತ್ರ್ಯಕ್ಕಾಗಿ ಇಂಗ್ಲಿಷರೊಡನೆ ಹೋರಾಡಬೇಕಾಯಿತು. (10) ಅವನು ತನ್ನ ಸಹೋದರಿಗಾಗಿ ಗುಲಾಬಿ ಹೂಗಳನ್ನು ಕೊಳ್ಳಬೇಕಾಗುವದು.

ಕ. ಶ:—ರಜೆ–छुट्टी(ಸ್ತ್ರೀ); ಚೀಲ–बोरा(ಪು); ಜೋಳ–ज्वार (ಪು); ವಾರ್ತೆ–खबर (ಸ್ತ್ರೀ); ಮರಣ–मौत (ಸ್ತ್ರೀ); ಹೋರಾಡುವದು–लड़ना ।

# पाठ 32

## देना, लगना प्रयोग (देना, लगना ಪ್ರಯೋಗ)

देना ಇದು ಅನುಮತಿ ಸೂಚಕವಾಗಿದ್ದು ಕೃದಂತ ಭಾವನಾಮದ ಮುಂದೆ ಪ್ರಯೋಗಿಸಲ್ಪಟ್ಟಾಗ 'ಅಪ್ಪಣೆಕೊಡು' ಎಂದರ್ಥ-

ವಾಗುತ್ತದೆ. ಆಗ ಕೃದಂತ ಭಾವನಾಮದ ಅಂತ್ಯ ನಾ ವು ನೇ ಆಗುತ್ತದೆ. ಉದಾ:— जाने दो; खाने दीजिये; पीने दे; करने दो; पढने दीजिये; ಇತ್ಯಾದಿ.

ಇದು ಸಕರ್ಮಕ ಕ್ರಿಯೆ ಇದ್ದು ಭೂತಕಾಲಗಳಲ್ಲಿ ಪ್ರಯೋಗಿಸಲ್ಪಟ್ಟಾಗ ಕರ್ತೃವಿಗೆ ने ಪ್ರತ್ಯಯ ಹತ್ತಿ, ಕ್ರಿಯಾಪದವು ने ನಿಯಮಕ್ಕನುಸಾರವಾಗಿ ನಡೆಯುತ್ತದೆ. ಉದಾ:—

(1) मैं ने अुसे किताब खरीदने दी।
ನಾನು ಅವನಿಗೆ ಪುಸ್ತಕವನ್ನು ಕೊಳ್ಳಗೊಟ್ಟೆನು.

(2) शकुन्तलाने अपने बेटेको केले खाने दिये थे।
ಶಕುಂತಲಾ ತನ್ನ ಮಗನಿಗೆ ಬಾಳೇಹಣ್ಣುಗಳನ್ನು ತಿನ್ನಗೊಟ್ಟಳು.

(3) किसने तुमको वहाँ जाने दिया है ?
ಯಾವನು ನಿನಗೆ ಅಲ್ಲಿ ಹೋಗಗೊಟ್ಟಿದ್ದಾನೆ ?

लग ಇದು ಆರಂಭಸೂಚಕವಾಗಿದ್ದು ಕೃದಂತ ಭಾವನಾಮದ ಮುಂದೆ ಪ್ರಯೋಗಿಸಲ್ಪಟ್ಟಾಗ 'ಪ್ರಾರಂಭಿಸು' ಎಂದರ್ಥವಾಗುತ್ತದೆ. ಆಗ ಕೃದಂತ ಭಾವನಾಮದ ಅಂತ್ಯ ನಾ ವು ನೇ ಆಗುತ್ತದೆ. ಇದು ಅಕರ್ಮಕ ಕ್ರಿಯೆಯಿದ್ದುದರಿಂದ ಭೂತಕಾಲಗಳಲ್ಲಿ ಕರ್ತೃವಿಗೆ ने ಪ್ರತ್ಯಯವು ಹತ್ತುವದಿಲ್ಲ. ಉದಾ:—

(1) आज सुबह से पानी बरसने लगा है।
ಇಂದು ಬೆಳಗಿನಿಂದ ಮಳೆಯಾಗಹತ್ತಿದೆ.

(2) दीप जलने लगे। ದೀಪಗಳು ಉರಿಯಹತ್ತಿದವು.

(3) वह काम करने लगता है।
ಅವನು ಕೆಲಸ ಮಾಡತೊಡಗುತ್ತಾನೆ.

(4) मैं भी कलसे हिन्दी सीखने लगूँगा। ನಾನು ಕೂಡ ನಾಳೆಯಿಂದ ಹಿಂದಿಯನ್ನು ಕಲಿಯಲಾರಂಭಿಸುವೆನು.

ಅಭ್ಯಾಸನಗಳು

(अ) ಕೆಳಗಿನ ವಾಕ್ಯಗಳ ಕಾಲಗಳನ್ನು ಬದಲಾಯಿಸದೆ देना, लगना ಗಳನ್ನು ಪ್ರಯೋಗಿಸಿರಿ.

(1) वह मज़दूर रोज सबेरे पाँच बजे से ही काम करता है। (लग) (2) मैं कलसे हिन्दी सीखूँगा। (लग) (3) मैंने अपना घोडा बेचा। (दे) (4) तुम वह काम करो। (दे) (5) कल पानी जोरसे बरसा था। (लग) (6) यह आम किसने खाया? (दे) (7) मैंने अपने दोस्तको पत्र लिखा। (लग) (8) वह लडकी मुझे देखकर हँसी। (लग)

(ब) ಹಿಂದಿಯಲ್ಲಿ ಭಾಷಾಂತರಿಸಿರಿ:—

(1) ಅವನು ನನಗೆ ಮಾವಿನ ಹಣ್ಣುಗಳನ್ನು ಕೊಳ್ಳಗೊಡ-ಲಿಲ್ಲ. (2) ಕಳ್ಳರನ್ನು ನೋಡಿ ನಾಯಿಗಳು ಬೊಗಳಲಾರಂಭಿಸಿ-ದವು. (3) ಅವರು ನಮ್ಮ ಕತೆಯನ್ನು ಕೇಳಲಾರಂಭಿಸಿದರು. (4) ಒಡೆಯನು ತನ್ನ ಆಳನ್ನು ಮನೆಗೆ ಹೋಗಗೊಡಲಿಲ್ಲ. (5) ಗುರುಗಳು ವಿದ್ಯಾರ್ಥಿಗಳಿಗೆ ಆಟವಾಡಗೊಡುತ್ತಾರೆ. (6) ಶ್ರೀಕೃಷ್ಣನು ಅರ್ಜುನನಿಗೆ ಗೀತೋಪದೇಶ ಮಾಡಲಾರಂಭಿಸಿ-ದನು. (7) ನಿಮ್ಮ ತಂದೆಯವರು ನಿನಗೆ ಬೆಂಗಳೂರಿಗೆ ಹೋಗ-ಗೊಡುವರೋ? (8) ನಿಮಗೆ ಈ ನೀರು ಕುಡಿಯಲು ಯಾರು ಒಪ್ಪಿಗೆ ಕೊಟ್ಟರು?

[ಕವ್ಹರ ೩ನೆಯ ಪುಟದಿಂದ]

ಶ್ರೀ. ಹುಂಡೇಕಾರ ಹಾಗು ಶ್ರೀ. ಜೆಳಲಪವರ, ಗುರುಗಳು ಪ್ರಾಥಮಿಕ ಶಿಕ್ಷಕರಾಗಿ ಮೇಲಿನ ವರ್ಗಗಳಲ್ಲಿ ಸೇವೆ ಸಲ್ಲಿಸಿದ ಅನುಭವದ ಸಾರವನ್ನೇ ಇದರಲ್ಲಿ ಇಳಿಸಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು. ಪ್ರಾಥಮಿಕ ಶಾಲೆಗಳ ಗುರುಗಳು ಹಾಗು ವಿದ್ಯಾರ್ಥಿಗಳು ಈ ಹೊತ್ತಿಗೆಯ ಲಾಭವನ್ನು ಪಡೆಯುವರೆಂದು ಆಶಿಸುವೆ.

ಧಾರವಾಡ
೩೦-೫-೧೯೬೦

ಎಸ್. ಎಮ್. ಮೇಗೂರ
ಬಿ. ಎ., ಬಿ. ಟಿ., ಡಿ. ಪಿ. ಈಡಿ., ಡಿ. ಬಿ. ಈ.,
ಎ. ಓ., ಮ್ಯು. ಸ್ಕೂಲಬೋರ್ಡ, ಧಾರವಾಡ.

## ಹಿಂದಿ ಕಲಿಯುವವರಿಗೆ ಕೈದೀವಿಗೆಯಾಗಿದೆ !

ಹಲವು ವರ್ಷಗಳವರೆಗೆ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭೆ (ಮದ್ರಾಸ)ಯ ಪ್ರಾರಂಭಿಕ ಹಾಗು ಉಚ್ಚ ಪರೀಕ್ಷೆಗಳಿಗಾಗಿ ವರ್ಗಗಳನ್ನು ನಡೆಯಿಸಿ, ಪ್ರಾಥಮಿಕ ಶಾಲೆಗಳಲ್ಲಿ ಮೇಲಿನ ವರ್ಗಗಳಿಗೆ ಹಿಂದಿಯನ್ನು ಕಲಿಸಿ **ತಾವು ಪಡೆದ ಅನುಭವದ ಸಾರವನ್ನು ಲೇಖಕದ್ವಯರು ಈ ಚಿಕ್ಕ ಹೊತ್ತಿಗೆಯಲ್ಲಿ ಎರಕ ಹೊಯ್ದಂತಾಗಿದೆ.** ಇದರಲ್ಲಿ ಹಿಂದಿ ವ್ಯಾಕರಣದ ವಿವಿಧಾಂಗಗಳನ್ನು ಸಂಕ್ಷೇಪವಾಗಿಯಾದರೂ ಸುಗಮವಾಗಿ, ಸುಲಲಿತವಾಗಿ ವಿವರಿಸಲಾಗಿದೆ. ಕ್ಲಿಷ್ಟ ನಿಯಮಗಳನ್ನು ಯೋಗ್ಯ ಉದಾಹರಣೆಗಳಿಂದ ಮನಂಬುಗುವಂತೆ ಸ್ಪಷ್ಟಗೊಳಿಸಲಾಗಿದೆ. ಪ್ರಾಥಮಿಕ ಶಾಲೆಗಳ ೫, ೬ ಮತ್ತು ೭ ನೆಯ ಇಯತ್ತೆಗಳ ಪಾಠ್ಯಕ್ರಮಕ್ಕೆ ಅನುಗುಣವಾಗಿ ಬರೆಯಲಾದ ಈ ಪುಸ್ತಕವು ಪ್ರಾಥಮಿಕ ಶಾಲೆಗಳ ಬಾಲಕರಿಗೂ ಶಿಕ್ಷಕರಿಗೂ ಹಾಗು ಯಾರ ನೆರವಿಲ್ಲದೆಯೇ ಹಿಂದಿ ಕಲಿಯಬೇಕೆನ್ನುವವರಿಗೂ ಕೈದೀವಿಗೆಯಾಗುವದರಲ್ಲಿ ಸಂದೇಹವಿಲ್ಲ. ಮುದ್ರಣವು ಅಂದವಾಗಿರುವದರಿಂದ ಪುಸ್ತಕವು ಉಪಯುಕ್ತವಾಗುವುದರ ಜೊತೆಗೆ ಆಕರ್ಷಕವೂ ಆಗಿದೆ. ಒಟ್ಟಾರೆ ಲೇಖಕರ ಪ್ರಯತ್ನವು ಸ್ತುತ್ಯವಾಗಿದೆ; ಅಭಿನಂದನೀಯವಾಗಿದೆ. ಅವರ ಪರಿಶ್ರಮದ ಫಲವಾಗಿ ರೂಪಗೊಂಡ **"ಆದರ್ಶ ಹಿಂದಿ-ಕನ್ನಡ ವ್ಯಾಕರಣ-1"**ವು ಎಲ್ಲ ವಿಧದಿಂದಲೂ ಸ್ವಾಗತಾರ್ಹವಾಗಿದೆ.

ಧಾರವಾಡ
೧-೬-೧೯೬೦

**ಶ್ರೀ. ಯು. ಶೀಲವಂತ,**
ಬಿ. ಎ., ಎಮ್. ಈಡಿ., ಡಿ. ಪಿ. ಈಡಿ., ಡಿ. ಬಿ. ಈ.,
ರಾ. ಭಾ. ವಿಶಾರದ,

# ಯಶಸ್ವಿಯಾಗಿ ಚಿಕ್ಕವರ ಮನಸ್ಸೆಳೆಯುತ್ತದೆ !

ಒಂದು ಅಕ್ಷರಕ್ಕೆ ಬದಲಾಗಿ ಇನ್ನೊಂದು ಅಕ್ಷರ ತಪ್ಪಿ ಬಿದ್ದರೆ, ಅಥವಾ ಒಂದು ಪ್ರತ್ಯಯಕ್ಕೆ ಬದಲಾಗಿ ಇನ್ನೊಂದು ಪ್ರತ್ಯಯ ಬಿದ್ದರೆ, ಅರ್ಥದಲ್ಲಿ ಬಹಳ ವ್ಯತ್ಯಾಸವಾಗಿ ಬಿಡಬಹುದು. ಅದಕ್ಕಾಗಿ ಯಾವದೇ ಭಾಷೆಯಲ್ಲಿ ವ್ಯಾಕರಣದ ಅಭ್ಯಾಸವು ಸಾಹಿತ್ಯದ ಅಭ್ಯಾಸಕ್ಕೆ ತಳಹದಿಯಾಗಿದೆ. ಸಾಹಿತ್ಯ-ರಚನೆಯಾದ ಮೇಲೆ ವ್ಯಾಕರಣ ಶಾಸ್ತ್ರವು ಒಂದು ಕಾಲಕ್ಕೆ ರಚಿತವಾದರೂ, ಇಂದು ವಿದ್ಯಾರ್ಥಿಗಳಿಗೆ, ಆದಷ್ಟು ಬೇಗನೇ ಮತ್ತು ಸ್ಪಷ್ಟವಾಗಿ ಜ್ಞಾನವಮಾಡಿ-ಕೊಡುವ ದೃಷ್ಟಿಯಿಂದ, ಭಾಷೆಗೆ ಆಧಾರವಾದ ವ್ಯಾಕರಣವನ್ನು ಪ್ರಾರಂಭ-ದಿಂದಲೇ ಕಲಿಸಲಾಗುತ್ತದೆ. ವ್ಯಾಕರಣ ಸಾಹಿತ್ಯಗಳ ಅಭ್ಯಾಸ ಜೊತೆ-ಜೊತೆಗೇ ನಡೆಯುತ್ತದೆ.

ವ್ಯಾಕರಣದ ಅಭ್ಯಾಸ, ತಿಳಿಯದೇ ಹೋದಲ್ಲಿ ಸ್ವಲ್ಪ ನೀರಸ; ಆದರೆ ಅದನ್ನು ಸರಸವಾಗಿ ಒಳ್ಳೆಯ ಉದಾಹರಣೆಗಳಿಂದ ಹೇಳಬಹುದು. 'ಆದರ್ಶ ಹಿಂದಿ-ಕನ್ನಡ ವ್ಯಾಕರಣ-1'ದಲ್ಲಿ ಶ್ರೀ ಎ. ಎಚ್. ಹುಂಡೇಕಾರ ಮತ್ತು ಶ್ರೀ ಎಮ್. ಎಚ್. ಬೆಳಲದವರ ಇವರು ಅದನ್ನು ಯಶಸ್ವಿಯಾಗಿ ಚಿಕ್ಕವರ ಮನಸ್ಸನ್ನೆಳೆಯುವಂತೆ ಮಾಡಿದ್ದಾರೆ.

ಕನ್ನಡ ದ್ರಾವಿಡಭಾಷೆ, ಹಿಂದೀ ಗೌಡಭಾಷೆ, ಕನ್ನಡದ ಮಕ್ಕಳಿಗೆ ಹಿಂದೀ ಭಾಷೆಯ ವ್ಯಾಕರಣವನ್ನು ತಿಳಿದುಕೊಳ್ಳುವದು ಸ್ವಲ್ಪ ಕಠಿಣವಾಗು-ತ್ತದೆ. ಆದರೆ ಪ್ರಯತ್ನ ಮಾಡಿದರೆ ಅವರಿಗೆ ಕಠಿಣವಾದ ವಿಷಯವಾವುದೂ ಇಲ್ಲ ಎಂಬುದು ಸಿದ್ಧವಾದ ಮಾತು. ಹಿಂದೀ ಕಲಿಯಲು ಯತ್ನಿಸುವ ಚಿಕ್ಕವರಿಗೆ ಯಾವ ತರಹದ ತೊಂದರೆಗಳು ಸಾಮಾನ್ಯವಾಗಿ ಬರಬಹುದು, ಎಂಬುದನ್ನು ಆ ಕ್ಷೇತ್ರದಲ್ಲಿ ಪ್ರಯೋಗಮಾಡಿ ಮನಗಂಡ ಶ್ರೀ ಹುಂಡೇಕಾರ ಮತ್ತು ಶ್ರೀ ಬೆಳಲದವರ ಇವರು ಅವುಗಳನ್ನೆಲ್ಲ ಈ ಪುಸ್ತಕದಲ್ಲಿ ಬಿಡಿಸಿದ್ದಾರೆ; ಹಿಂದೀ ಕಲಿಯಲೆತ್ನಿಸುವ ದೊಡ್ಡವರಿಗೂ ಈ ಪುಸ್ತಕವು ತುಂಬ ಉಪ-ಯುಕ್ತವಾಗಿದೆ.

ಪ್ರಾಥಮಿಕ ಶಾಲೆಯ ಪಾಠ್ಯಕ್ರಮವನ್ನು ಅನುಸರಿಸಿ ಬರೆದ ಈ ಪುಸ್ತಕವು ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಬಳಗದಲ್ಲಿ ಹೆಚ್ಚಿನ ಮೆಚ್ಚಿಕೆಯನ್ನು ಪಡೆಯುವದೆಂದು ನಂಬಿದ್ದೇನೆ.

ಧಾರವಾಡ
೧—೬—೧೯೬೦

ಪ್ರೊ. ಸರೋಜಿನಿ ಮಹಿಷಿ
ಎಮ್. ಎ., ಎಲ್‌ಎಲ್. ಬಿ.
ರಾಷ್ಟ್ರಭಾಷಾ ರತ್ನ
ಜನತಾ ಕಾಲೇಜ, ಧಾರವಾಡ